

ಕರ್ನಾಟಕ ಸರ್ಕಾರ

# ತಿಳಿ ಕನ್ನಡ

## ದ್ವಿತೀಯಭಾಷಾ ಕನ್ನಡ ಪಠ್ಯಪುಸ್ತಕ

(ಪರಿಷ್ಕೃತ)





## ಐದನೆಯ ತರಗತಿ

**ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)**

ನಂ.೪, ೧೦೦ ಅಡಿ ವರ್ತುಲ ರಸ್ತೆ, ಬನಶಂಕರಿ,

ಮೂರನೆಯ ಹಂತ, ಬೆಂಗಳೂರು – ೫೬೦ ೦೮೫

# ಪಠ್ಯಪುಸ್ತಕ ರಚನಾ ಸಮಿತಿ

**ಅಧ್ಯಕ್ಷರು :**

**ಶ್ರೀ ರಾಮಣ್ಣ ಹವಳೆ,**

ನಿವೃತ್ತ ಶಿಕ್ಷಕರು. 'ಸೌಜನ್ಯಶ್ರೀ' ನೀಲಕಂಠೇಶ್ವರ ನಗರ ರಾಯಚೂರು.

**ಸದಸ್ಯರು :**

೧. **ಶ್ರೀಮತಿ ಲಲಿತಾ ವೈ. ಎನ್.** ಸಹ ಶಿಕ್ಷಕರು, ಸ.ಕಿ.ಪ್ರಾ.ಶಾಲೆ, ಕಾಟಿಕೆರೆ ಕ್ಯಾಂಪ್, ಶಿವಮೊಗ್ಗ ತಾ.

೨. **ಶ್ರೀಮತಿ ಪರಿಮಳಾ ವಿ. ಜಾಲಿಹಾಳ,** ಸಹ ಶಿಕ್ಷಕರು, ಸರಕಾರಿ ಪ್ರೌಢಶಾಲೆ, ಗಾಜಗಾರ ಪೇಟೆ, ರಾಯಚೂರು.

೩. **ಶ್ರೀ ಲಕ್ಷ್ಮಣ ಲೋಕರೆ,** ಅಧ್ಯಾಪಕರು, ಬಾಲಕಿಯರ ಸರ್ಕಾರಿ ಪ್ರೌಢಶಾಲೆ, ರಾಯಚೂರು.

೪. **ಶ್ರೀಮತಿ ರಾಜೇಶ್ವರಿ,** ಕ್ಷೇತ್ರ ಸಂಪನ್ಮೂಲ ವ್ಯಕ್ತಿ, ಬಿ.ಆರ್.ಪಿ. ಬೆಂಗಳೂರು ದಕ್ಷಿಣ ವಲಯ – ೦೧.

೫. **ಶ್ರೀ ಸೋಮಶೇಖರ ಬಾಬು ಹಲಸಗಿ,** ಕ್ಷೇತ್ರ ಸಂಪನ್ಮೂಲವ್ಯಕ್ತಿ, ಬೈಲಹೊಂಗಲ ತಾ. ಬೆಳಗಾವಿ ಜಿಲ್ಲೆ.

೬. **ಶ್ರೀ ಪಿ.ಎ.ಬಿ. ಈಶ್ವರ,** ಚಿತ್ರಕಲಾ ಶಿಕ್ಷಕರು, ಹಮ್ದರ್ದ ಪ್ರೌಢಶಾಲೆ, ರಾಯಚೂರು.

**ಪರಿಶೀಲಕರು :**

**ಡಾ. ಎಸ್. ಪಿ. ಪದ್ಮಿನಿ,** ಕನ್ನಡ ಉಪನ್ಯಾಸಕರು, ಗುಪ್ತಾ ಕಾಲೇಜು, ಬನಶಂಕರಿ ೩ನೇ ಹಂತ, ಬೆಂಗಳೂರು.

**ಸಂಪಾದಕ ಮಂಡಳಿ ಸದಸ್ಯರು :**

೧. **ಪ್ರೊ. ಸಾ.ಶಿ. ಮರುಳಯ್ಯ,** ಸಾಹಿತಿಗಳು, ರಾಗಿಣಿ, ಹಂಪಿನಗರ, ಬೆಂಗಳೂರು.

೨. **ಪ್ರೊ. ಅ.ರಾ. ಮಿತ್ರ,** ಸಾಹಿತಿಗಳು, ಕೆ.ಎಚ್.ಬಿ. ಕಾಲೋನಿ, ಯಲಹಂಕ, ಬೆಂಗಳೂರು.

೩. **ಡಾ. ವಿಷ್ಣು ಎಂ. ಶಿಂದೆ,** ಸಹಾಯಕ ಪ್ರಾಧ್ಯಾಪಕರು, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ವಿಜಯಪುರ.

**ಮುಖ್ಯ ಸಂಯೋಜಕರು :**

**ಪ್ರೊ. ಜಿ.ಎಸ್. ಮುಡಂಬಡಿತ್ತಾಯ,**

ಪಠ್ಯಕ್ರಮ ಪರಿಷ್ಕರಣೆ ಮತ್ತು ಪಠ್ಯಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ) ಬೆಂಗಳೂರು.

**ಸಲಹೆ ಮತ್ತು ಮಾರ್ಗದರ್ಶನ :**

೧. **ಶ್ರೀ ನಾಗೇಂದ್ರ ಕುಮಾರ್** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು.

೨. **ಶ್ರೀಮತಿ ನಾಗಮಣಿ ಸಿ.,** ಉಪನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು.

**ಕಾರ್ಯಕ್ರಮ ಸಂಯೋಜಕರು :**

**ಶ್ರೀ ಪಾಂಡುರಂಗ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು.

# ಮುನ್ನುಡಿ

೨೦೦೫ನೇ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಕರ್ನಾಟಕ ಪಠ್ಯಪುಸ್ತಕ ಸಂಘವು ೨೦೧೦ ನೇ ಸಾಲಿನಿಂದ ಒಂದನೇ ತರಗತಿಯಿಂದ ಹತ್ತನೇ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು ೧೨ ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಕೋರ್ ವಿಷಯಗಳನ್ನು ೭ ಮಾಧ್ಯಮಗಳಲ್ಲಿ ರಚನೆ ಮಾಡಲಾಗುತ್ತಿದೆ. ಇವುಗಳಲ್ಲಿ ೧ ರಿಂದ ೫ ನೇ ತರಗತಿಯವರೆಗೆ ಪರಿಸರ ವಿಜ್ಞಾನ, ಗಣಿತ, ೬ ರಿಂದ ೧೦ ನೇ ತರಗತಿಯವರೆಗೆ ಕೋರ್ ವಿಷಯಗಳಾದ ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳಿರುತ್ತವೆ.

**೨೦೦೫ ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.**

- ಕಲಿಕೆಯನ್ನು ಜೀವನದ ಅವಶ್ಯಕತೆಗಳೊಂದಿಗೆ ಜೋಡಿಸುವುದು
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು
- ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರ ದೃಷ್ಟಿಯ ಬೋಧನೆಯನ್ನು ಅಳವಡಿಸುವುದು
- ಶಾಲೆಯ ಹೊರಗಿನ ಬದುಕಿಗೆ ಜ್ಞಾನವನ್ನು ಸಂಯೋಜಿಸುವುದು.
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿಪಡಿಸುವುದು.

ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach) ಹಾಗೂ ಸುರುಳಿಯಾಕಾರದ ವಿಧಾನ (Spiral Approach) ಗಳನ್ನು ಅಳವಡಿಸಲಾಗಿದೆ.



ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಅವಶ್ಯಕ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥ ಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾ ಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರ ಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ

ಒತ್ತು ನೀಡಲಾಗಿದೆ. ಈ ಕೌಶಲ್ಯಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸೆ, ಮನೋಭಾವ ಹಾಗೂ ಮೌಲ್ಯಗಳ ಸಂವರ್ಧನೆಗೆ ಅನುವು ಮಾಡಿಕೊಡಲಾಗಿದೆ. ಈ ಸಾಮರ್ಥ್ಯಗಳು ಮಕ್ಕಳಲ್ಲಿ ಬೆಳೆದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗುವುದಿಲ್ಲ. ಹೀಗಾಗಿ ಪಠ್ಯಪುಸ್ತಕಗಳನ್ನು ಭಾಷಾ ಕೌಶಲ್ಯಗಳ ಸಂವರ್ಧನೆಗೆ ಪೂರಕವಾಗಿ ಹಾಗೂ ಮಕ್ಕಳ ಮನೋವೈಶಾಲ್ಯವನ್ನು ಬೆಳೆಸುವ ಸಲುವಾಗಿ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ವಿದ್ಯಾರ್ಥಿಗಳು ಗುಂಪು ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗೂ ಸಂವಹನ ಕೌಶಲ್ಯಗಳ ಸಂವರ್ಧನೆಗೆ ಪೂರಕವಾಗುವಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ (learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (learning to do) ಯನ್ನು ಮಕ್ಕಳಲ್ಲಿ ವೃದ್ಧಿಮಾಡುತ್ತವೆ. ಹತ್ತನೇ ತರಗತಿಯ ಪಠ್ಯಪುಸ್ತಕಗಳು ಒಂದು ದೃಷ್ಟಿಯಲ್ಲಿ ವೈಶಿಷ್ಟ್ಯಪೂರ್ಣವಾಗಿವೆ. ಇತರ ಪಠ್ಯಪುಸ್ತಕಗಳಂತೆಯೇ ಈ ಪಠ್ಯಪುಸ್ತಕಗಳು ವಿದ್ಯಾರ್ಥಿಗಳು ವಿವಿಧ ಸಾಮರ್ಥ್ಯ ಹಾಗೂ ಕೌಶಲ್ಯಗಳನ್ನು ಬೆಳೆಸಿಕೊಳ್ಳಲು ಸಹಾಯ ಮಾಡುತ್ತವೆ. ಇದರೊಂದಿಗೆ ೧೦ ನೇ ತರಗತಿ ಶಿಕ್ಷಣದ ಒಂದು ಹಂತದ ಅಂತ್ಯದಾಣವಾಗಿರುವುದರಿಂದ ವಿದ್ಯಾರ್ಥಿ ವಿದ್ಯಾರ್ಥಿನಿಯರು ಪಬ್ಲಿಕ್ ಪರೀಕ್ಷೆಯನ್ನು ಎದುರಿಸಬೇಕಾಗುತ್ತದೆ.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ, ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿವರ್ಗದವರಿಗೆ, ಜಿಲ್ಲಾ ತರಬೇತಿ ಸಂಸ್ಥೆಗಳಿಗೆ, ರಾಜ್ಯ ಮಟ್ಟದ ಪಠ್ಯಪುಸ್ತಕ ಸಂಪಾದಕ ಮಂಡಳಿಯ ಸದಸ್ಯರಿಗೆ ಮತ್ತು ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ತನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕೆಲವು ಸಾಹಿತಿಗಳ ಹಾಗೂ ಕವಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಈ ವಿಚಾರದಲ್ಲಿ ತಮ್ಮ ಒಪ್ಪಿಗೆಯನ್ನು ನೀಡಿರುವ ಬರಹಗಾರರಿಗೆ ಹಾಗೂ ಕವಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಗಿದೆ.



**ಪ್ರೊ. ಜಿ. ಎಸ್. ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯವಸ್ತು ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

**ನಾಗೇಂದ್ರ ಕುಮಾರ್**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

## ಸಮಕ್ಷಮ

ಭಾರತ ಸರ್ಕಾರ ೨೦೦೫ ರಲ್ಲಿ ನೀಡಿದ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನ ಅನ್ವಯ ಕರ್ನಾಟಕ ಸರ್ಕಾರವು ಸಹ ಪಠ್ಯ ಸಮಷ್ಟಿಯನ್ನು ಕೇಂದ್ರ ಸರ್ಕಾರದ ನಿರ್ದೇಶನದನ್ವಯ ಪರಿಷ್ಕರಣೆ ಕೈಗೊಂಡಿದೆ.

ಕರ್ನಾಟಕ ಸರ್ಕಾರವು ರಾಜ್ಯಭಾಷೆಯಾದ ಕನ್ನಡವನ್ನು ಪರಿಚಯಿಸುವ ಹಿನ್ನೆಲೆಯಲ್ಲಿ ಒಂದನೆಯ ತರಗತಿಯಿಂದ ನಾಲ್ಕನೆಯ ತರಗತಿಯವರೆಗೆ ಶ್ರೇಣೀಕೃತವಾಗಿ ಅನೌಪಚಾ- ರಿಕವಾಗಿ ಬೋಧಿಸಲಾಗುತ್ತಿದೆ. ಈ ಹಿನ್ನಲೆಯಲ್ಲಿ ೫ ನೇ ತರಗತಿಯಿಂದ ಔಪಚಾರಿಕವಾಗಿ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಕಲಿಯಲು ಅನುಕೂಲವಾಗುವಂತೆ ಈ ಪಠ್ಯವನ್ನು ಸಿದ್ಧಪಡಿಸಲಾಗಿದೆ. ಮಕ್ಕಳ ವಯಸ್ಸು ಸಾಮಾನ್ಯವಾಗಿ ೧೦ ವರುಷವಿದ್ದು ಅವರ ಭಾವನಾತ್ಮಕ ಬದುಕಿನನ್ವಯ, ಕನ್ನಡ ಕಲಿಕೆಯ ಶಬ್ದಭಂಡಾರವನ್ನು ಗುರುತಿಸಿಕೊಂಡು ಅವರ ಮಾನಸಿಕ ಸ್ತರದ ಆಧಾರದನ್ವಯ ಪಠ್ಯವನ್ನು ರಚಿಸಲಾಗಿದೆ. ಮಗುವಿನ ಕಲಿಕೆ ಹಾಗೂ ಬೋಧನೆಗೆ ಬಹಳಷ್ಟು ತಾಂತ್ರಿಕ ಸೌಲಭ್ಯಗಳು ಲಭ್ಯವಿದ್ದರೂ  ಇಂದೂ ಸಹ ಪಠ್ಯಪುಸ್ತಕಗಳು ಬೋಧನೆಯಲ್ಲಿ ಮಹತ್ವದ ಸ್ಥಾನ ಹೊಂದಿವೆ. ಅದು ಶಿಶು ಕೇಂದ್ರಿತವಾಗಿರಬೇಕು ಎಂಬುದು ನಿರ್ವಿವಾದ. ಇದರ ಜೊತೆಗೆ ಶಿಕ್ಷಕರೂ ಸಹ ಅನಿವಾರ್ಯವಾಗಿದ್ದಾರೆ. ಅವರು ಪಠ್ಯದ ರಚನೆಯ ಅಡಿಗಲ್ಲು ಅರಿತಿದ್ದರೆ ಉತ್ತಮ.



ಮಗು ಕೇಂದ್ರಿತ ಪಠ್ಯವು ಪರಿಷ್ಕೃತ ಸಾಮರ್ಥ್ಯಾಧಾರಿತವಾಗಿದ್ದು ಪ್ರತಿಯೊಂದು ಪಾಠವನ್ನು ರಚಿಸುವ ಸಂದರ್ಭದಲ್ಲಿ ಮಗು ಭಾಷಿಕವಾಗಿಯೂ  ಸಾಂಸ್ಕೃತಿಕವಾಗಿಯೂ ನೈತಿಕವಾಗಿಯೂ  ಕಲಿಯಬೇಕಾದದ್ದನ್ನು ಸ್ವಕಲಿಕೆ ಹಿನ್ನೆಲೆಯಲ್ಲಿ ಕಲಿಯಬೇಕು. ಸೃಜನಶೀಲತೆಯನ್ನು ಬೆಳೆಸುವ ನಿಟ್ಟಿನಲ್ಲಿ ಉದ್ದೇಶಪೂರ್ವಕವಾಗಿ ಪರಿಶ್ರಮಪಡಲಾಗಿದೆ. ಭಾಷೆಯನ್ನು ಸ್ವಾಭಾವಿಕವಾಗಿ ಕಲಿಯಬೇಕೆಂಬ ಹಿನ್ನೆಲೆಯಲ್ಲಿ ಭಾಷಾ ಆಟಗಳನ್ನು, ಚಟುವಟಿಕೆಗಳನ್ನು, ಪದರಚನೆಯ ಕೌಶಲ್ಯವನ್ನು ಅಳವಡಿಸಿಲಾಗಿದೆ.

ಪಾಠಗಳ ವಿಷಯಗಳು ಚೇತೋಹಾರಿಯಾಗಿದ್ದು; ಮಗುವಿನ ಮನೋವಿಜ್ಞಾನದ ಹಿನ್ನೆಲೆಯಲ್ಲಿ ರೂಪಿಸಲಾಗಿದೆ. ಪುಸ್ತಕದ ಕೊನೆಯಲ್ಲಿರುವ ಪಠ್ಯಸಮಷ್ಟಿಯ ತಃಖ್ತೆಯನ್ನು ಶಿಕ್ಷಕರು, ವಿದ್ಯಾರ್ಥಿಗಳು ಹಾಗೂ ಪಾಲಕರು ಗಮನಿಸಿದರೆ ಬೋಧನೆಗೆ, ಕಲಿಕೆಗೆ ಒಂದು ಹೊಸ ಆಯಾಮ ದೊರಕುತ್ತದೆ.

ಇದರಿಂದ ಉದ್ದೇಶಪೂರ್ವಕ ಬೋಧನೆ ಹಾಗೂ ಕಲಿಕೆ ಸಾಧ್ಯವಾಗಿ ಭಾಷೆಯ ಸಾಮರ್ಥ್ಯಗಳು ಚೆನ್ನಾಗಿ ಕರಗತವಾಗುತ್ತವೆ. ಪ್ರತಿಪಾಠದ ಬೋಧನಾ ಪದ್ಧತಿಯನ್ನು ನಮೂದಿಸಲಾಗಿದೆ. ಬೋಧಕರು ಗಮನಿಸಿರಿ. ಕಲಿಕೆಗೆ ಬೋಧನೆ ಎಷ್ಟು ಮುಖ್ಯವೋ

ಚಟುವಟಿಕೆಗಳು ಅಷ್ಟೇ ಮುಖ್ಯ. ಆಡಿ ಕಲಿ, ಮಾತಾಡಿ ಕಲಿ, ಬರೆದು ಕಲಿ, ಬದುಕಲು ಕಲಿ. ಈ ಪಠ್ಯದ ಉದ್ದೇಶವಾಗಿದೆ.

ಪಠ್ಯಪುಸ್ತಕದ ಜೊತೆ ಅಭ್ಯಾಸ ಪುಸ್ತಕ ಬೇರೆಯಾಗಿ ನೀಡದೆ, ಆಯಾ ಪಾಠದಲ್ಲಿಯೇ ಅಭ್ಯಾಸವನ್ನು ಅಳವಡಿಸಲಾಗಿದೆ. ಭಾಷೆಯ ಕಲಿಕೆಯನ್ನು ಸ್ವಕಲಿಕೆಗೆ ಆಧಾರಗೊಳಿಸಿದೆ. ಸ್ವ ಓದು, ಜ್ಞಾನ, ಗ್ರಹಿಕೆ, ಅಭಿವ್ಯಕ್ತಿ ಮತ್ತು ಪ್ರಶಂಸೆಯನ್ನು ಕರಗತಗೊಳಿಸುವಲ್ಲಿ ಹೆಚ್ಚಿನ ಪ್ರಯತ್ನ ಮಾಡಲಾಗಿದೆ.

ಪಠ್ಯದಲ್ಲಿ ಮಗು ಒಂದಾಗುವಿಕೆಯೇ ನಮ್ಮ ಉದ್ದೇಶ. ಅದನ್ನು ಹಬ್ಬಗಳು ಪಾಠದಲ್ಲಿ ಮಾದರಿಯಾಗಿ ನೀಡಲಾಗಿದೆ. ತಾಯ್ತನ, ದೇಶಪ್ರೇಮ, ಸೌಂದರ್ಯ ಪ್ರಜ್ಞೆ ಹೀಗೆ ಹತ್ತು ಹಲವು ಬದುಕಿನ ಮುಖಗಳನ್ನು ಪರಿಚಯಿಸಿದೆ. ಹೆಚ್ಚಿನ ಓದಿಗಾಗಿ ಪೂರಕ ಓದು ಸೇರಿಸಲಾಗಿದೆ. ಮಕ್ಕಳೆ ಓದಿ ಗ್ರಹಿಸಿಕೊಳ್ಳಬೇಕು.

ಭಾವ ಸೌಂದರ್ಯವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಇದೊಂದು ಪ್ರಯತ್ನ. ಶಿಕ್ಷಕರು ವಿದ್ಯಾರ್ಥಿಗಳು ಇದನ್ನು ಪ್ರೀತಿಯಿಂದ ಸ್ವೀಕರಿಸಿರಿ.

ಪಠ್ಯಪುಸ್ತಕ ರಚನೆಯಲ್ಲಿ ನೆರವಾದ ಸಮಿತಿಯ ಸನ್ಮಿತ್ರ ಸದಸ್ಯರ ಬೆಂಬಲ, ವಿಶ್ವಾಸ, ಸಹಕಾರ ಮತ್ತು ಹೃದಯವಂತಿಕೆಯನ್ನು ನೆನೆಯುತ್ತೇನೆ. ಚಿತ್ರ ಕಲಾವಿದರ ಶ್ರಮ ಸಾರ್ಥಕವಾಗಿದೆ. ಪಠ್ಯಪುಸ್ತಕ ಸಂಘದ ವ್ಯವಸ್ಥಾಪಕ ನಿರ್ದೇಶಕರು, ಸಂಯೋಜಕರು, ಉಪ ನಿರ್ದೇಶಕರು, ಹಿರಿಯ ಸಹಾಯಕ ನಿರ್ದೇಶಕರು, ಅವರ ಸಿಬ್ಬಂದಿ ಮತ್ತು ನಮ್ಮೀ ಕಾರ್ಯಕ್ಕೆ ಸಕಲ ಸಹಕಾರ ಮಾಡಿಕೊಟ್ಟ ಎಲ್ಲರಿಗೂ ವಿಶ್ವಾಸ ಪೂರ್ವಕ ವಂದನೆಗಳು.



**ರಾಮಣ್ಣ ಹವಳೆ**
ಅಧ್ಯಕ್ಷರು
ಪಠ್ಯಪುಸ್ತಕ ರಚನಾ ಸಮಿತಿ

# ಪಠ್ಯಪುಸ್ತಕ ಪರಿಷ್ಕರಣ ಸಮಿತಿಗಳ ವಿವರ

**ಸರ್ವಾಧ್ಯಕ್ಷರು**

**ಪ್ರೊ. ಬರಗೂರು ರಾಮಚಂದ್ರಪ್ಪ**

ರಾಜ್ಯ ಪಠ್ಯಪುಸ್ತಕ ಪರಿಷ್ಕರಣ ಸಮಿತಿ, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು-೮೫

**ಅಧ್ಯಕ್ಷರು**

**ಡಾ. ಕೆ. ಕೆಂಪೇಗೌಡ**

ನಿವೃತ್ತ ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು-೬

**ಸದಸ್ಯರು**

**ಡಾ. ಗಣೇಶ್ ಜಿ. ಎಂ.**
ಸಹಾಯಕ ಪ್ರಾಧ್ಯಾಪಕರು, ಎಂ.ಎಲ್.ಎಂ.ಎನ್.
ಶಿಕ್ಷಣ ಮಹಾವಿದ್ಯಾಲಯ, ಜ್ಯೋತಿನಗರ, ಚಿಕ್ಕಮಗಳೂರು.

**ಡಾ. ಬಂಗಾರಿಮಠ ಎಸ್. ವಿ.**
ಮುಖ್ಯಶಿಕ್ಷಕರು, ಸರ್ಕಾರಿ ಪ್ರೌಢಶಾಲೆ,
ಪುಡಕಲಕಟ್ಟಿ, ಧಾರವಾಡ ಜಿಲ್ಲೆ.

**ಡಾ. ಕೆ. ಷರೀಫಾ**
ಲೇಖಕಿ, ನಂ.೫/ಎ ೧ನೇ ಮಹಡಿ, ೧ನೇ ಬ್ಲಾಕ್,
೨ನೇ ಕ್ರಾಸ್, ಆರ್.ಟಿ. ನಗರ, ಬೆಂಗಳೂರು.

**ಶ್ರೀ ಪ್ರಕಾಶ್ ಎಸ್.**
ಸಿ.ಆರ್.ಪಿ. ಕ್ಷೇತ್ರ ಸಂಪನ್ಮೂಲ ಕೇಂದ್ರ, ಮದ್ದೂರು.
ಮಂಡ್ಯ ಜಿಲ್ಲೆ.

**ಶ್ರೀ ನಾಗರಾಜಾಚಾರಿ**
ಕನ್ನಡ ಶಿಕ್ಷಕರು, ಸರ್ಕಾರಿ ಉರ್ದು ಪ್ರೌಢಶಾಲೆ,
ಡಾ.ಟಿ.ಸಿ.ಎಂ. ರಾಯನ್ ರಸ್ತೆ, ಬೆಂಗಳೂರು.

**ಶ್ರೀ ವೆಂಕಟೇಶ್ ಡಿ. ಎನ್.**
ಚಿತ್ರಕಲಾ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ,
ಉರಮಾರ ಕಸಲಗೆರೆ, ಮಂಡ್ಯ ದಕ್ಷಿಣ ವಲಯ.

## ಉನ್ನತ ಪರಿಶೀಲನಾ ಸಮಿತಿ

**ಡಾ. ಎಚ್.ಎಸ್. ರಾಘವೇಂದ್ರರಾವ್**
ನಿವೃತ್ತ ಪ್ರಾಧ್ಯಾಪಕರು, #೭, ೧೫ನೇ ಕ್ರಾಸ್, ೫ನೇ ಫೇಸ್,
ಜೆ.ಪಿ.ನಗರ, ಬೆಂಗಳೂರು-೭೮

**ಡಾ. ಕಲಾವತಿ**
ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು,
ಬಳ್ಳಾರಿ.

**ಡಾ. ಜಿ.ಆರ್. ತಿಪ್ಪೇಸ್ವಾಮಿ**
ನಿವೃತ್ತ ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,
ಮಾನಸ ಗಂಗೋತ್ರಿ, ಮೈಸೂರು-೬

**ಡಾ. ಪ್ರಶಾಂತ್ ನಾಯಕ್**
ಪ್ರಾಧ್ಯಾಪಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ
ಶಂಕರಘಟ್ಟ, ಶಿವಮೊಗ್ಗ.

**ಡಾ. ಸೈಯದ್ ಜಮೀರ್ ಉಲ್ಲಾಷರೀಫ್**
ನಿವೃತ್ತ ಪ್ರಾಂಶುಪಾಲರು, ಭಟ್ಕಳ,
ಉತ್ತರ ಕನ್ನಡ ಜಿಲ್ಲೆ.

**ಡಾ. ಗೀತಾ ವಸಂತ**
ಸಹ ಪ್ರಾಧ್ಯಾಪಕರು ಕನ್ನಡ ವಿಭಾಗ, ತುಮಕೂರು
ವಿಶ್ವವಿದ್ಯಾಲಯ, ತುಮಕೂರು.

**ಡಾ. ಯಲ್ಲಪ್ಪ ಹಿಮ್ಮಡಿ**
ಎಸ್.ಪಿ.ಎಂ. ಕಲಾ ಮತ್ತು ವಾಣಿಜ್ಯ ಕಾಲೇಜು,
ರಾಯಬಾಗ, ಬೆಳಗಾವಿ ಜಿಲ್ಲೆ.

**ಡಾ. ಸತ್ಯನಾರಾಯಣ ಎಚ್.ಎಸ್.**
ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು,
ಬಸವನಗುಡಿ, ಬೆಂಗಳೂರು.

**ಸಲಹೆ ಮತ್ತು ಮಾರ್ಗದರ್ಶನ**

**ಶ್ರೀ ಎಂ.ಪಿ. ಮಾದೇಗೌಡ,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು-೮೫

**ಶ್ರೀ ಕೆ.ಜಿ.ರಂಗಯ್ಯ,** ಉಪನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು-೮೫

**ಕಾರ್ಯಕ್ರಮ ಸಂಯೋಜಕರು**

**ಶ್ರೀಮತಿ ಎಂ.ಡಿ. ಉಷಾ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು-೮೫

# ಪರಿಷ್ಕರಣೆ ಕುರಿತು

ಒಂದರಿಂದ ಹತ್ತನೇ ತರಗತಿಯ ಪಠ್ಯಪುಸ್ತಕಗಳ ಬಗ್ಗೆ ಪ್ರಕಟಗೊಂಡ ಸಾರ್ವಜನಿಕ ಅಭಿಪ್ರಾಯಗಳನ್ನು ಗಮನಿಸಿ ಮಾನ್ಯ ಮುಖ್ಯಮಂತ್ರಿಯವರೂ ಅರ್ಥಸಚಿವರೂ ಆಗಿರುವ ಶ್ರೀ ಸಿದ್ಧರಾಮಯ್ಯನವರು ತಮ್ಮ ೨೦೧೪-೧೫ ರ ಬಜೆಟ್‌ನಲ್ಲಿ ತಜ್ಞರ ಸಮಿತಿಯನ್ನು ರಚಿಸುವ ಘೋಷಣೆ ಮಾಡಿದರು. ತಜ್ಞರು ಅನುಸರಿಸಬೇಕಾದ ಮೂಲ ಆಶಯವನ್ನು ಹೀಗೆ ಹೇಳಿದರು: "ಪಠ್ಯಪುಸ್ತಕಗಳನ್ನು ಸಾಮಾಜಿಕ ಸಾಮರಸ್ಯ, ನೈತಿಕ ಮೌಲ್ಯಗಳು, ವ್ಯಕ್ತಿತ್ವ ವಿಕಸನ, ವೈಜ್ಞಾನಿಕ ಮತ್ತು ವೈಚಾರಿಕ ಮನೋಭಾವ, ಜಾತ್ಯತೀತತೆ ಮತ್ತು ರಾಷ್ಟ್ರೀಯ ಬದ್ಧತೆಗಳಿಗೆ ಅನುವಾಗುವಂತೆ ತಜ್ಞರ ಸಮಿತಿಯನ್ನು ಪುನರ್ ರಚಿಸಲಾಗುವುದು" ಇದು ಬಜೆಟ್ ಭಾಷಣದಲ್ಲಿ ಸಾದರಪಡಿಸಿದ ಆಶಯ.

ಆನಂತರ ಶಿಕ್ಷಣ ಇಲಾಖೆಯು ಒಂದರಿಂದ ಹತ್ತನೇ ತರಗತಿಯವರೆಗಿನ ಪಠ್ಯಪುಸ್ತಕಗಳ ಪರಿಷ್ಕರಣೆಗಾಗಿ ೨೭ ಸಮಿತಿಗಳನ್ನು ರಚಿಸಿ ದಿನಾಂಕ: ೨೪. ೧೧. ೨೦೧೪ ರಂದು ಆದೇಶ ಹೊರಡಿಸಿತು. ಈ ಸಮಿತಿಗಳು ವಿಷಯವಾರು ಮತ್ತು ತರಗತಿವಾರು ಮಾನದಂಡಕ್ಕನುಗುಣವಾಗಿ ರಚಿತವಾದವು. ವಿವಿಧ ಪಠ್ಯವಿಷಯಗಳಿಗೆ ಸಂಬಂಧಿಸಿದ ತಜ್ಞರು, ಅಧ್ಯಾಪಕರು ಈ ಸಮಿತಿಗಳಲ್ಲಿದ್ದಾರೆ. ಈಗಾಗಲೇ ಲಿಖಿತವಾಗಿ ಬಂದಿರುವ ಅನೇಕ ಆಕ್ಷೇಪಗಳು ಮತ್ತು ವಿಶ್ಲೇಷಣೆಗಳನ್ನು ಪರಿಶೀಲಿಸಿ, ತಪ್ಪು ಒಪ್ಪುಗಳ ಬಗ್ಗೆ ನಿರ್ಣಯಿಸಿ ಪಠ್ಯಪುಸ್ತಕಗಳನ್ನು ಪರಿಷ್ಕರಿಸುವ ಹೊಣೆಹೊತ್ತ ಈ ಸಮಿತಿಗಳಿಗೆ 'ಅಗತ್ಯವಿದ್ದಲ್ಲಿ ಪಠ್ಯವಸ್ತುವನ್ನು ಪರಿಷ್ಕರಿಸಿ ನಂತರ ಪಠ್ಯಪುಸ್ತಕಗಳನ್ನು ಪರಿಷ್ಕರಿಸುವ' ಸ್ವಾತಂತ್ರ್ಯವನ್ನು ೨೪. ೧೧. ೨೦೧೪ ರ ಆದೇಶದಲ್ಲೇ ನೀಡಲಾಗಿತ್ತು. ಆನಂತರ ೧೯.೦೯.೨೦೧೫ ರಂದು ಹೊಸ ಆದೇಶ ಹೊರಡಿಸಿ 'ಅಗತ್ಯವಿದ್ದಲ್ಲಿ ಪುನರ್ ರಚಿಸುವ' ಸ್ವಾತಂತ್ರ್ಯವನ್ನು ನೀಡಲಾಯಿತು. ಹೀಗೆ ಸಮಗ್ರ ಪರಿಷ್ಕರಣೆಗೊಂಡ ಪಠ್ಯಪುಸ್ತಕಗಳನ್ನು ೨೦೧೬-೧೭ ರ ಬದಲು ೨೦೧೭-೧೮ ನೇ ಶೈಕ್ಷಣಿಕ ವರ್ಷದಲ್ಲಿ ಜಾರಿಗೊಳಿಸಲಾಗುವುದೆಂದು ಇದೇ ಆದೇಶದಲ್ಲಿ ತಿಳಿಸಲಾಯಿತು.

ಅನೇಕ ವ್ಯಕ್ತಿಗಳೂ ಸಂಘಟನೆಗಳೂ ಸ್ವಯಂಪ್ರೇರಿತರಾಗಿ ಪಠ್ಯಪುಸ್ತಕಗಳ ಮಾಹಿತಿ ದೋಷ, ಆಶಯ ದೋಷಗಳನ್ನು ಪಟ್ಟಿಮಾಡಿ ಶಿಕ್ಷಣ ಸಚಿವರಿಗೆ, ಪಠ್ಯಪುಸ್ತಕ ಸಂಘಕ್ಕೆ ಕಳುಹಿಸಿದ್ದರು. ಅವುಗಳ ಪರಿಶೀಲನೆ ಮಾಡಿದ್ದಲ್ಲದೆ, ಸಮಿತಿಗಳಾಚೆಗೆ ಅನೇಕ ಸಂವಾದಗಳನ್ನು ಏರ್ಪಡಿಸಿ ವಿಚಾರ ವಿನಿಮಯ ಮಾಡಿಕೊಂಡಿದ್ದೇವೆ. ಪ್ರಾಥಮಿಕ ಮತ್ತು ಪ್ರೌಢಶಾಲಾ ಅಧ್ಯಾಪಕರ ಸಂಘಗಳ ಜೊತೆ ಚರ್ಚಿಸಿದ್ದಲ್ಲದೆ ಪ್ರಶ್ನಾವಳಿ ಸಿದ್ಧಪಡಿಸಿ ಅಧ್ಯಾಪಕರಿಗೆ ಕಳಿಸಿ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ. ಅಧ್ಯಾಪಕರು, ವಿಷಯ ಪರಿವೀಕ್ಷಕರು ಮತ್ತು ಡಯಟ್ ಪ್ರಾಂಶುಪಾಲರ ಪ್ರತ್ಯೇಕ ಸಭೆಗಳನ್ನು ನಡೆಸಿ ವಿಶ್ಲೇಷಣಾತ್ಮಕ ಅಭಿಮತಗಳನ್ನು ಪಡೆಯಲಾಗಿದೆ. ವಿಜ್ಞಾನ, ಸಮಾಜವಿಜ್ಞಾನ, ಗಣಿತ, ಭಾಷೆ ಸಾಹಿತ್ಯಗಳಿಗೆ ಸಂಬಂಧಿಸಿದ ತಜ್ಞರಿಗೆ ಮೊದಲೇ ಪಠ್ಯಪುಸ್ತಕಗಳನ್ನು ಕಳುಹಿಸಿ ಆನಂತರ ಸಭೆನಡೆಸಿ ಚರ್ಚಿಸಲಾಗಿದೆ. ಮಹಿಳಾ ಸಂಘಟನೆ ಹಾಗೂ ವಿಜ್ಞಾನ ಸಂಬಂಧಿ ಸಂಸ್ಥೆಗಳನ್ನು ಆಹ್ವಾನಿಸಿ ಚಿಂತನೆ ನಡೆಸಲಾಗಿದೆ. ಹೀಗೆ ಎಲ್ಲಾ ಮೂಲಗಳಿಂದ ಪಡೆದ ಅರಿವಿನ ಆಧಾರದ ಮೇಲೆ ಪಠ್ಯಪುಸ್ತಕಗಳನ್ನು ಅಗತ್ಯವಿದ್ದಕಡೆ ಪರಿಷ್ಕರಿಸಲಾಗಿದೆ.

ಬಹುಮುಖ್ಯವಾದ ಇನ್ನೊಂದು ಸಂಗತಿಯನ್ನು ಇಲ್ಲಿ ಹೇಳಬೇಕು. ಕೇಂದ್ರೀಯ ಶಾಲಾ (ಎನ್.ಸಿ.ಇ.ಆರ್.ಟಿ) ಪಠ್ಯಪುಸ್ತಕಗಳ ಜೊತೆ ರಾಜ್ಯದ ಪಠ್ಯಪುಸ್ತಕಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿ ಸಲಹೆಗಳನ್ನು ನೀಡಲು ವಿಜ್ಞಾನ, ಗಣಿತ ಮತ್ತು ಸಮಾಜವಿಜ್ಞಾನಕ್ಕೆ ಸಂಬಂಧಿಸಿದಂತೆ ತಜ್ಞರ ಮೂರು ಸಮಿತಿಗಳನ್ನು ರಚಿಸಲಾಯಿತು. ಈ ಸಮಿತಿಗಳು ನೀಡಿದ ತೌಲನಿಕ ವಿಶ್ಲೇಷಣೆ ಮತ್ತು ಸಲಹೆಗಳನುಆಧರಿಸಿ ರಾಜ್ಯ ಪಠ್ಯಪುಸ್ತಕಗಳ ಗುಣಮಟ್ಟವನ್ನು ಹೆಚ್ಚಿಸಲಾಗಿದೆ. ಕೇಂದ್ರೀಯ ಶಾಲಾ ಪಠ್ಯಪುಸ್ತಕಗಳಿಗಿಂತ ನಮ್ಮ ರಾಜ್ಯದ ಪಠ್ಯಪುಸ್ತಕಗಳ ಗುಣಮಟ್ಟ ಕಡಿಮೆಯಾಗದಂತೆ ಕಾಯ್ದುಕೊಳ್ಳಲಾಗಿದೆ. ಜೊತೆಗೆ ಆಂಧ್ರ, ತಮಿಳುನಾಡು, ಮಹಾರಾಷ್ಟ್ರಗಳ ಪಠ್ಯಪುಸ್ತಕಗಳ ಜೊತೆ ನಮ್ಮ ಪಠ್ಯಪುಸ್ತಕಗಳನ್ನು ಪರಿಶೀಲಿಸಲಾಗಿದೆ.

ಇನ್ನೊಂದು ಸ್ಪಷ್ಟನೆಯನ್ನು ನೀಡಲು ಬಯಸುತ್ತೇನೆ. ನಮ್ಮ ಸಮಿತಿಗಳು ಮಾಡಿರುವುದು ಪರಿಷ್ಕರಣೆಯೇ ಹೊರತು ಪಠ್ಯಪುಸ್ತಕಗಳ ಸಮಗ್ರ ರಚನೆಯಲ್ಲ. ಆದ್ದರಿಂದ ಈಗಾಗಲೇ ರಚಿತವಾಗಿರುವ ಪಠ್ಯಪುಸ್ತಕಗಳ ಸ್ವರೂಪಕ್ಕೆ ಎಲ್ಲಿಯೂ ಧಕ್ಕೆಯುಂಟುಮಾಡಿಲ್ಲ. ಲಿಂಗತ್ವ ಸಮಾನತೆ, ಪ್ರಾದೇಶಿಕ ಪ್ರಾತಿನಿಧ್ಯ, ರಾಷ್ಟ್ರೀಯ ಸಮಗ್ರತೆ, ಸಮಾನತೆ, ಸಾಮಾಜಿಕ ಸಾಮರಸ್ಯಗಳ ಹಿನ್ನೆಲೆಯಲ್ಲಿ ಕೆಲವು ಪರಿಷ್ಕರಣೆಗಳು ನಡೆದಿವೆ. ಹೀಗೆ ಪರಿಷ್ಕರಿಸುವಾಗ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಮತ್ತು ರಾಜ್ಯ ಪಠ್ಯಕ್ರಮ ಚೌಕಟ್ಟುಗಳನ್ನು ಮೀರಿಲ್ಲವೆಂದು ತಿಳಿಸಬಯಸುತ್ತೇವೆ. ಜೊತೆಗೆ ನಮ್ಮ ಸಂವಿಧಾನದ ಆಶಯಗಳನ್ನು ಅನುಸರಿಸಲಾಗಿದೆ. ಸಮಿತಿಗಳು ಮಾಡಿದ ಪರಿಷ್ಕರಣೆಯನ್ನು ಮತ್ತೊಮ್ಮೆ ಪರಿಶೀಲಿಸಲು ವಿಷಯವಾರು ಉನ್ನತ ಪರಿಶೀಲನ ಸಮಿತಿಗಳನ್ನು ರಚಿಸಿ ಅಭಿಪ್ರಾಯಪಡೆದು ಅಳವಡಿಸಲಾಗಿದೆ.



ಹೀಗೆ ಕ್ರಮಬದ್ಧವಾಗಿ ನಡೆದ ಕೆಲಸಕ್ಕೆ ತಮ್ಮನ್ನು ತಾವು ಸಂಪೂರ್ಣ ತೊಡಗಿಸಿಕೊಂಡ ೨೭ ಸಮಿತಿಗಳ ಅಧ್ಯಕ್ಷರು ಮತ್ತು ಸದಸ್ಯರನ್ನು ಹಾಗೂ ಉನ್ನತ ಪರಿಶೀಲನಾ ಸಮಿತಿಯ ಸಮಸ್ತರನ್ನು ಕೃತಜ್ಞತೆಯಿಂದ ನೆನೆಯುತ್ತೇವೆ. ಅಂತೆಯೇ ಸಮಿತಿಗಳ ಕೆಲಸ ಸುಗಮವಾಗಿ ನಡೆಯುವಂತೆ ವ್ಯವಸ್ಥೆಮಾಡಲು ಕಾರ್ಯಕ್ರಮ ಅಧಿಕಾರಿಗಳಾಗಿ ನಿಷ್ಠೆಯಿಂದ ದುಡಿದ ಪಠ್ಯಪುಸ್ತಕ ಸಂಘದ ಎಲ್ಲಾ ಅಧಿಕಾರಿಗಳನ್ನೂ ನೆನೆಯುತ್ತೇವೆ. ಸಹಕರಿಸಿದ ಸಿಬ್ಬಂದಿಗೂ ನಮ್ಮ ವಂದನೆಗಳು. ಅಭಿಪ್ರಾಯ ನೀಡಿ ಸಹಕರಿಸಿದ ಸರ್ವ ಸಂಘಟನೆಗಳು ಮತ್ತು ತಜ್ಞರಿಗೆ ಧನ್ಯವಾದಗಳು.

**(ಶ್ರೀ ಎಂ.ಪಿ. ಮಾದೇಗೌಡ)**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ)
ಬೆಂಗಳೂರು–೮೫

**(ಪ್ರೊ. ಬರಗೂರು ರಾಮಚಂದ್ರಪ್ಪ)**
ಸರ್ವಾಧ್ಯಕ್ಷರು
ರಾಜ್ಯ ಪಠ್ಯಪುಸ್ತಕ ಪರಿಷ್ಕರಣ ಸಮಿತಿ
ಕರ್ನಾಟಕ ಪಠ್ಯಪುಸ್ತಕ ಸಂಘ(ರಿ)
ಬೆಂಗಳೂರು–೮೫




# ಪರಿವಿಡಿ

## ಭಾಗ – ೧ ಪೂರ್ವ ಸಿದ್ಧತಾ ಪಾಠಗಳು

### (ಅ) ಚುಕ್ಕಿ ಸೇರಿಸು – ಚಿತ್ರ ರಚಿಸು



## (ಆ) ಅಪಾಯದಿಂದ ಪಾರಾದ ಪಾರಿವಾಳಗಳು

ಬೇಡನೊಬ್ಬ ಪಕ್ಷಿಗಳನ್ನು ಹಿಡಿಯಲು ಕಾಳು ಹಾಕಿ ಬಲೆ ಹರಡಿದ್ದನು. ಕಾಳಿನ ಆಸೆಗಾಗಿ ಪಾರಿವಾಳಗಳು ಪುರ್ ಎಂದು ಹಾರಿ ಬಂದವು. ಅವು ಕಾಳು ತಿನ್ನುತ್ತ ತಿನ್ನುತ್ತ ಬಲೆಯಲ್ಲಿ ಸಿಕ್ಕಿಕೊಂಡವು.



ಪಾರಿವಾಳಗಳು ಬಲೆಯಿಂದ ಬಿಡಿಸಿಕೊಳ್ಳಲು ಹೆಣಗಾಡಿದವು. ಆದರೆ ಸಾಧ್ಯವಾಗಲಿಲ್ಲ. ಅದೇ ಸಮಯಕ್ಕೆ ಕಾಗೆಯೊಂದು ಅದೇ ದಾರಿಯಲ್ಲಿ ಹಾರಿಹೋಗುತ್ತಿತ್ತು. ಅದು ಬಲೆಗೆ ಸಿಕ್ಕಿಬಿದ್ದಿದ್ದ ಪಾರಿವಾಳಗಳನ್ನು ನೋಡಿ ಮರುಗಿತು. ಪಾರಿವಾಳಗಳು ಕಾಗೆಯ ಸಹಾಯ ಬೇಡಿದವು. ಕಾಗೆ ಅವುಗಳಿಗೆ ‘ಒಗ್ಗಟ್ಟಿನಲ್ಲಿ ಬಲವಿದೆ, ಎಲ್ಲರೂ ಕೂಡಿ ಒಮ್ಮೆಲೆ ಹಾರಿಬಿಡಿ’ ಎಂದು ಹುರಿದುಂಬಿಸಿತು. ಪಾರಿವಾಳಗಳು ಪ್ರಯತ್ನ ಮಾಡಿ ಒಮ್ಮೆಲೆ ಬಲೆಸಹಿತ ಮೇಲೆ ಹಾರಿದವು.



ಪಾರಿವಾಳಗಳು ಬಲೆಸಹಿತ ಬೆಟ್ಟದ ಸಮೀಪ ಇಳಿದವು. ಇಲಿಗಳ ಸಹಾಯ ಬೇಡಿದವು. ಇಲಿಗಳು ತಮ್ಮ ಹಲ್ಲುಗಳಿಂದ ಬಲೆಯನ್ನು ಕತ್ತರಿಸಿದವು. ಹೀಗೆ ಪಾರಿವಾಳಗಳು ಅಪಾಯದಿಂದ ಪಾರಾದವು. ಅವುಗಳು ಕಾಗೆ ಮತ್ತು ಇಲಿಗಳಿಗೆ ಧನ್ಯವಾದ ಹೇಳಿ ಪುರ್ರನೆ ಹಾರಿಹೋದವು.





**ನೀತಿ : ಒಗ್ಗಟ್ಟಿನಲ್ಲಿ ಬಲವಿದೆ ಮತ್ತು ಕಷ್ಟದಲ್ಲಿರುವವರಿಗೆ ಸಹಾಯ ಮಾಡು.**

## ಅಭ್ಯಾಸ

**ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.**

೧. ಬೇಡನು ಬಲೆಯನ್ನು ಏಕೆ ಬೀಸಿದನು?

..........................................................................................

೨. ಬೇಡನು ಪಾರಿವಾಳಗಳಿಗೆ ಯಾವ ಆಸೆ ತೋರಿಸಿದ್ದನು?

..........................................................................................

೩. ಪಾರಿವಾಳಗಳಿಗೆ ಬಲೆಯಿಂದ ಬಿಡಿಸಿಕೊಳ್ಳಲು ಏನು ಮಾಡಿದವು?

..........................................................................................

೪. ಕಾಗೆಯು ಪಾರಿವಾಳಗಳಿಗೆ ಏನೆಂದು ಹುರಿದುಂಬಿಸಿತು?

..........................................................................................

೫. ಪಾರಿವಾಳಗಳು ಬಲೆಸಹಿತ ಹಾರಿ ಎಲ್ಲಿ ಇಳಿದವು?

..........................................................................................

೬. ಪಾರಿವಾಳಗಳು ಯಾರ ಸಹಾಯದಿಂದ ಬಲೆಯಿಂದ ಬಿಡಿಸಿಕೊಂಡವು?

..........................................................................................

೭. ಇಲಿಗಳು ಪಾರಿವಾಳಗಳನ್ನು ಬಲೆಯಿಂದ ಹೇಗೆ ಬಿಡಿಸಿದವು?

..........................................................................................

೮. ಪಾರಿವಾಳಗಳು ಕಾಗೆ ಮತ್ತು ಇಲಿಗಳಿಗೆ ಏಕೆ ಧನ್ಯವಾದ ಹೇಳಿದವು?

..........................................................................................

೯. 'ಅಪಾಯದಿಂದ ಪಾರಾದ ಪಾರಿವಾಳಗಳು' ಕಥೆಯ ನೀತಿ ಏನು?

..........................................................................................

## (ಇ) ಗುರುವಾದ ಜೇಡರಹುಳು!

ಸಾಧಕರಿಗೆ ಜೇಡರಹುಳು ಒಂದು ಜೀವಂತ ಪಾಠವಾಗಿದೆ. ಸಹನೆ ಮತ್ತು ಪ್ರಯತ್ನಶೀಲತೆಗೆ ಜೇಡರಹುಳು ಒಂದು ಆದರ್ಶ. ಬಲೆ ನಿರ್ಮಿಸುವ ಕೆಲಸದಲ್ಲಿ ಅದು ಹಲವು ಬಾರಿ ಸೋಲುತ್ತದೆ. ನೆಲಕ್ಕೆ ಉರುಳುತ್ತದೆ. ಆದರೂ ಅದು ಸದ್ದಿಲ್ಲದೆ ತನ್ನ ಪ್ರಯತ್ನವನ್ನು ಸಹನೆಯಿಂದ ಮುಂದುವರೆಸುತ್ತದೆ. ಅದು ಕೊನೆಗೂ ಒಂದು ಬಲೆಯನ್ನು ನಿರ್ಮಿಸಿಯೇ ನಿರ್ಮಿಸುತ್ತದೆ.



ಒಬ್ಬ ರಾಜ ಯುದ್ಧದಲ್ಲಿ ಹಲವು ಬಾರಿ ವೈರಿಗಳಿಂದ ಸೋತುಹೋದ. ಸೋತ ಆತ ನಿರಾಶನಾದ. ಹಾಗೇ ಕುಳಿತಿದ್ದಾಗ ಅವನ ಕಣ್ಣಿಗೆ ಒಂದು ಜೇಡರಹುಳು ಕಾಣಿಸಿಕೊಂಡಿತು. ಅದನ್ನು ಆತ ಗಮನವಿರಿಸಿ ನೋಡಿದ!

ಜೇಡರಹುಳು ತನ್ನ ಬಲೆ ರಚಿಸುವ ಕಾರ್ಯದಲ್ಲಿ ಹಲವು ಸಾರಿ ಸೋತಿತು. ಸೋತು ನೆಲಕ್ಕುರುಳಿತು. ಆದರೂ ಅದು ಸದ್ದು ಮಾಡಲಿಲ್ಲ. ಸಹನೆ ಕಳೆದುಕೊಳ್ಳಲಿಲ್ಲ, ಪ್ರಯತ್ನ ಬಿಡಲಿಲ್ಲ. ಮರಳಿ ಯತ್ನವ ಮಾಡು ಎಂಬಂತೆ ಆ ಜೇಡರ ಹುಳುವು ಎಡಬಿಡದೆ ಪ್ರಯತ್ನಿಸಿ ಕೊನೆಗೆ ಬಲೆಯೊಂದನ್ನು ನೇಯ್ದೇಬಿಟ್ಟಿತು! ಅದು ತನ್ನ ಪ್ರಯತ್ನದಲ್ಲಿ ಸಫಲತೆ ಪಡೆಯುವವರೆಗೂ ಸುಮ್ಮನಾಗಲಿಲ್ಲ.

ಇದನ್ನು ರಾಜ ಕಂಡ. ಜೇಡರಹುಳುವೇ ಅವನ ಪಾಲಿಗೆ ಗುರುವಾಯಿತು. ಜೇಡರ ಹುಳು ಅವನಿಗೆ "ಮರಳಿ ಯತ್ನವ ಮಾಡು, ಜಯ ಪಡೆಯುವವರೆಗೂ ಹೋರಾಡು, ನಿರಾಶನಾಗಬೇಡ" ಎಂಬ ಪಾಠವನ್ನು ಬೋಧಿಸಿದಂತಾಯಿತು.



ಜೇಡರಹುಳುವನ್ನು ಅನುಸರಿಸಿ, ಆ ರಾಜನೂ ಮರಳಿ ಯತ್ನವ ಮಾಡಿದ, ಮತ್ತೆ ವೈರಿಗಳನ್ನೆದುರಿಸಿದ, ಹೋರಾಡಿದ. ಅಂತೂ ಕೊನೆಗೆ ಆತ ಜಯಶಾಲಿಯಾದ. ಜೇಡರ ಹುಳುವಿಗೆ ಆ ರಾಜ ಕೃತಜ್ಞನಾದ.

ಕಲಿಯುವವರಿಗೆ ಎಲ್ಲೆಲ್ಲೂ ಗುರುಗಳಿದ್ದಾರೆ! ಎಲ್ಲೆಲ್ಲೂ ನಮಗೆ ಪಾಠ ಹೇಳುವ ಘಟನೆಗಳು ನಡೆಯುತ್ತವೆ. ಎಡೆಬಿಡದೆ ಪ್ರಯತ್ನವನ್ನು ಸಾಧಿಸಿದರೆ ಸಾಧ್ಯವಾಗದ್ದು ಯಾವುದೂ ಇಲ್ಲ! ಗಾದೆಯೇ ಇದೆಯಲ್ಲ – ಸಾಧಿಸಿದರೆ ಸಬಳ (ಕಬ್ಬಿಣದ ಹಾರೆ) ನುಂಗಬಹುದಂತೆ!.

– ಡಾ. ಸೀ. ಹೊಸಬೆಟ್ಟು ಪುತ್ತೂರು.

**ನೀತಿ: ಸತತ ಪ್ರಯತ್ನವೇ ಗೆಲುವಿನ ಗುಟ್ಟು.**

## ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.

೧. ಜೇಡರಹುಳು ಯಾವ ಗುಣಗಳಿಗೆ ಆದರ್ಶವಾಗಿದೆ?

........................................................................................................

೨. ಜೇಡರಹುಳು ಬಲೆ ನಿರ್ಮಿಸುವ ಕೆಲಸವನ್ನು ಹೇಗೆ ಮಾಡುತ್ತದೆ?

........................................................................................................

೩. ಸೋತ ರಾಜನಿಗೆ ಜೇಡರಹುಳು ಯಾವ ರೂಪದಲ್ಲಿ ಕಂಡಿತು?

........................................................................................................

೪. ಸೋತ ರಾಜನಿಗೆ ಜೇಡರಹುಳು ಏನೆಂದು ಬೋಧಿಸಿದಂತಾಯಿತು?

........................................................................................................

೫. ಸೋತ ರಾಜನು ಜೇಡರಹುಳುವಿಗೆ ಏಕೆ ಕೃತಜ್ಞನಾದನು?

........................................................................................................

೬. ಕಲಿಯುವವರು ಗುರುಗಳನ್ನು ಎಲ್ಲಿ ಕಂಡುಕೊಳ್ಳುತ್ತಾರೆ?

........................................................................................................

೭. 'ಗುರುವಾದ ಜೇಡರಹುಳು' ಕಥೆಯಲ್ಲಿ ಬಳಕೆಯಾಗಿರುವ ಗಾದೆ ಮಾತು ಯಾವುದು?

........................................................................................................

೮. 'ಗುರುವಾದ ಜೇಡರಹುಳು' ಕಥೆಯಿಂದ ಯಾವ ನೀತಿ ಕಲಿಯುವಿರಿ?

........................................................................................................



## (ಈ) ಆಸೆ

(ಈ ಹಾಡನ್ನು ರಾಗಬದ್ಧವಾಗಿ ಅಭಿನಯದಿಂದ ಹೇಳಿರಿ)

–ಕೆ. ಎಸ್. ನರಸಿಂಹಸ್ವಾಮಿ.

ಹಕ್ಕಿಯ ಹಾಡಿಗೆ ತಲೆದೂಗುವ ಹೂ
ನಾನಾಗುವ ಆಸೆ
ಹಸುವಿನ ಕೊರಳಿನ ಗೆಜ್ಜೆಯ ದನಿಯು
ನಾನಾಗುವ ಆಸೆ
ಹಬ್ಬಿದ ಕಾಮನ ಬಿಲ್ಲಿನ ಮೇಲಿನ
ಮುಗಿಲಾಗುವ ಆಸೆ
ಚಿನ್ನದ ಬಣ್ಣದ ಜಿಂಕೆಯ ಕಣ್ಣಿನ
ಮಿಂಚಾಗುವ ಆಸೆ
ತೋಟದ ಕಂಪಿನ ಉಸಿರಲಿ ತೇಲುವ
ಜೇನಾಗುವ ಆಸೆ
ಕಡಲಿನ ನೀಲಿಯ ನೀರಲಿ ಬಳುಕುವ
ಮೀನಾಗುವ ಆಸೆ
ಸಿಡಿಲನು ಕಾರುವ ಬಿರುಮಳೆಗಂಜದೆ
ಮುನ್ನಡೆಯುವ ಆಸೆ
ನಾಳೆಯ ಬದುಕಿನ ಇರುಳಿನ ತಿರುವಿಗೆ
ದೀಪವನಿಡುವಾಸೆ



## ಅ) ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.

೧. ಕವಿ ಯಾವ ಹಾಡಿಗೆ ತಲೆದೂಗಲು ಆಸೆ ಪಡುತ್ತಾರೆ?

೨. ಕವಿ ಯಾವುದರ ದನಿಯಾಗಲು ಇಚ್ಛಿಸುತ್ತಾರೆ?

೩. ಕಾಮನಬಿಲ್ಲು ಕಂಡ ಕವಿಗೆ ಯಾವ ಆಸೆ ಮೂಡಿತು?

೪. ಜಿಂಕೆಯ ಬಣ್ಣ ಯಾವುದು?

೫. ಕವಿ ಜೇನಾಗಲು ಆಸೆಪಟ್ಟಿದ್ದು ಏಕೆ?

೬. ಕಡಲಿನ ನೀರಿನ ಬಣ್ಣ ಯಾವುದು?

೭. ಕವಿ ಯಾವುದಕ್ಕೆ ಅಂಜದೆ ಮುನ್ನಡೆಯ ಬಯಸುತ್ತಾರೆ?

೮. ಕವಿ ದೀಪವನ್ನು ಎಲ್ಲಿ ಇಡಲು ಆಸೆ ಹೊಂದಿದ್ದಾರೆ?

೯. 'ಆಸೆ' ಕವಿತೆ ಬರೆದ ಕವಿಯ ಹೆಸರೇನು?

೧೦. ಕವಿಯಂತೆ ನೀವು ಏನಾಗಲು ಆಸೆ ಪಡುತ್ತೀರಿ?



## ಆ) ಕೆಳಗಿನ ಚೌಕದಲ್ಲಿ ಕಾಮನ ಬಿಲ್ಲಿನ ಚಿತ್ರ ಬರೆದು ಬಣ್ಣ ತುಂಬಿರಿ.



# (ಉ) ಗಾಳಿಪಟ

ಊರ ಮುಂದಿನ ಬಯಲಿನಲ್ಲಿ ಮಕ್ಕಳ ಕಲರವವೋ ಕಲರವ. ಅವರ ನೋಟ ಆಗಸದ ಕಡೆಗೆ. ಅರೆರೆ! ಅದೋ ನೋಡಿ! ಮೇಲೆಕೆಳಗೆ ಲಾಗ ಹೊಡೆಯುವ ಚೆಲುವಿನ ತಾರೆಗಳು! ಪಟಪಟ ಗಾಳಿಪಟಗಳು. ಅಬ್ಬಬ್ಬಾ! ಬಗೆಬಗೆಯ ಪಟಗಳಿವು, ಬುಗುಲಿ ಪಟ, ಹನುಮನ ಪಟ, ತಾರಾ ಪಟ, ಆಯತ ಪಟ, ಚೌಕದ ಪಟ, ಕೋಲ ಪಟ, ಗಾಳಿಯ ಪಟ, ಹಾವಿನ ಪಟ, ಹೀಗೆ ಸಾಲುಸಾಲಾಗಿ ಹಾರುವ ಸರಣಿ ಪಟಗಳು.



ಆಗಸಕೆ ದಾಳಿಯಿಡುವ ಪಟಗಳೋ ನೂರಾರು. ರಂಗುಗಳೋ ಹಲವಾರು. ಕೆಂಪು, ಕೇಸರಿ, ಹಸಿರು, ನೀಲಿ, ಹಳದಿ ರಂಗುರಂಗಿನ ರಂಗೋಲಿ ಮೂಡಿಸಿವೆ. ಗಾಳಿಪಟಗಳ ರೂಪು-ರಂಗುಗಳು ಸಾವಿರ ತರಹ. ಆದರೆ ಅವುಗಳಿಗೆ ಹಾಕುವ ದಾರದ ಗಂಟು ಒಂದೇ ತರಹ. ಮೇಲೆ ಮೇಲೆ ಹಾರಲು ಪಟಗಳಿಗೆ ಬೇಕು ಬಾಲಂಗೋಚಿ. ಅದು ಸಮತೋಲನ ಬಾಲಂಗೋಚಿ.

ಆಗಸದಿ ಬಳುಕುವ ಈ ಪಟಗಳು, ಕೆಲವರಿಗೆ ಮಾವು ತರಲು ಆಗಸಕೆ ಹಾರಿದ ಬಾಲಹನುಮನಂತೆ ಕಾಣುವುವು. ಹಲವರಿಗೆ ನೀಲಿ ಸಾಗರದಲಿ ಈಜುವ ರಂಗುರಂಗಿನ ಮೀನುಗಳಾಗಿ ಕಾಣುವುವು. ತಿಳಿದವರಿಗೆ ಮಾನವರ ಸಂದೇಶವನ್ನು ದೇವಲೋಕಕ್ಕೆ ಸಾಗಿಸುವ ರಾಯಭಾರಿಗಳಂತೆ ಕಾಣುವುವು. ವಿಧವಿಧ ರಂಗು, ಬಗೆಬಗೆ ಆಕಾರದ ಪಟಗಳು, ನೀಲಿ ನಭಕೆ ರಂಗು ಬಳಿಯುವ ಮಕ್ಕಳ ಆಟವಿದು. ಮೇಲಾಟದಲಿ ಸಂತಸಪಡುವ ತುಂಟಾಟವಿದು. ಮನ ಸೆಳೆಯುವ ನೋಟವಿದು.

ಪಟ ಹಾರಿಸಲು ಸುಳಿವ ಗಾಳಿಬೇಕು. ಅದು ಸುಂಟರಗಾಳಿಯಾದರೆ ಸಂಕಟವೋ ಸಂಕಟ. ಬಾಲಂಗೋಚಿ ಹರಿದರೆ ಗಿರಿಗಿರಿ ತಿರುತಿರುಗಿ ಗಿರಕಿ ಹೊಡೆಯುವವು. ಮೇಲೆ ಹಾರಲಾರದೆ ಕೆಳಗಿಳಿದು ಬರಲು ಹಟ ಹಿಡಿಯುವವು. ಬಿರುಗಾಳಿ ಬೀಸಿತೆಂದರೆ ದಾರ ಹರಿದು ಜಟಾಪಟಿ. ಮಕ್ಕಳು ಗಾಳಿಗೆ ಹಿಡಿಶಾಪ ಹಾಕುವರು. ಮರುಗಳಿಗೆ ಪಟ ಹಿಡಿಯಲು ಓಡುವರು. ಮಾಳಿಗೆಯಿಂದ ಮಾಳಿಗೆಗೆ ಜಿಗಿಯಲು ಆರಂಭವಾಗುವುದು. ಆಗ ತಂದೆ ತಾಯಿಗಳ ಗೋಳಾಟ. ಮಕ್ಕಳಿಗೆ ಆಟ, ಪಾಲಕರಿಗೆ ಸಂಕಟ. ದಾರ ಹರಿದ ಪಟ ಹಿಡಿದರೆ, ಆಗ ನೋಡು ಸಂತಸದ ನೋಟ! ಎಂದೂ ಕಾಣದ ಆನಂದದ ಕೂಟ.



* * * *

**ಅ) ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

೧. ಮಕ್ಕಳು ಗಾಳಿಪಟ ಹಾರಿಸಲು ಎಲ್ಲಿ ಸೇರಿದ್ದರು?

..........................................................................................................

೨. ವಿವಿಧ ಬಗೆಯ ಗಾಳಿಪಟಗಳು ಯಾವುವು?

..........................................................................................................

೩. ಆಗಸದಲ್ಲಿ ಕಂಡುಬಂದ ರಂಗುರಂಗಿನ ಪಟಗಳು ಯಾವುವು?

.............................................................................................................

೪. ಗಾಳಿಪಟಗಳಿಗೆ ಬಾಲಂಗೋಚಿ ಏಕೆ ಬೇಕು?

.............................................................................................................

೫. ಗಾಳಿಪಟಗಳ ಬಾಲಂಗೋಚಿ ಹರಿದರೆ ಏನಾಗುವುದು?

.............................................................................................................

೬. ಮಕ್ಕಳು ಗಾಳಿಗೆ ಯಾವಾಗ ಶಾಪ ಹಾಕುವರು?

.............................................................................................................

೭. ಗಾಳಿಪಟ ಹಾರಿಸುವುದು ಮಕ್ಕಳಿಗೆ ಆಟ, ಪಾಲಕರಿಗೆ ಸಂಕಟ ಆಗುವುದು ಯಾವಾಗ?

.............................................................................................................

೮. ಆಕಾಶದಲ್ಲಿ ಹಾರುವ ಗಾಳಿಪಟಗಳು ಜನರಿಗೆ ಹೇಗೆ ಕಾಣುತ್ತಿದ್ದವು?

.............................................................................................................

.............................................................................................................



**ಆ) ಈ ಸಾಲುಗಳನ್ನು ಗಟ್ಟಿಯಾಗಿ ಓದಿರಿ.**

೧. ಮೇಲೆ ಕೆಳಗೆ ಲಾಗ ಹೊಡೆಯುವ ಚೆಲುವಿನ ತಾರೆಗಳು! ಪಟಪಟ ಗಾಳಿಪಟಗಳು.

೨. ವಿಧವಿಧ ರಂಗು, ಬಗೆಬಗೆ ಆಕಾರದ ಪಟಗಳು, ನೀಲಿ ನಭಕೆ ರಂಗು ಬಳಿಯುವ ಮಕ್ಕಳ ಆಟವಿದು. ಮೇಲಾಟದಲಿ ಸಂತಸ ಪಡುವ ತುಂಟಾಟವಿದು. ಮನ ಸೆಳೆಯುವ ನೋಟವಿದು.

೩. ತಂದೆ ತಾಯಿಗಳ ಗೋಳಾಟ. ಮಕ್ಕಳಿಗೆ ಆಟ, ಪಾಲಕರಿಗೆ ಸಂಕಟ.

## ಇ) ಇವುಗಳನ್ನು ಹಲವು ಸಲ ವೇಗವಾಗಿ ಉಚ್ಚರಿಸಿರಿ.

೧. ಕಾಗೆಪುಕ್ಕ, ಗುಬ್ಬಿಪುಕ್ಕ.

೨. ಅಶ್ವತ್ಥರಳೀ ಮರದ ಬುಡದ ತಳಿರೊಡೆದೆರೆಡೆಲೆಯಾಯ್ತು.

೩. ಕಸ್ತೂರಿರಂಗ ಕಿತ್ತೂರು ರಸ್ತೇಲಿ ಪಿಸ್ತೂಲೇಟ್ ತಿಂದ್ ಸತ್‌ಬಿದ್ದಿದ್ನಂತೆ.

೪. ತರಿಕೆರೆ ಏರಿಮ್ಯಾಲೆ ಮೂರುಕರಿ ಕುರಿಮರಿ.

೫. ಕಮಲಳ ಲಂಗ ಜಳಜಳ, ಸುಮಳ ಲಂಗ ಪಳಪಳ.

## ಈ) ಕೆಳಗೆ ನೀಡಿರುವ ಜಾಗದಲ್ಲಿ ವಿವಿಧ ಗಾಳಿಪಟಗಳ ಚಿತ್ರ ಬರೆಯಿರಿ.





ಭಾಗ – ೨ ಗದ್ಯ ಪಾಠ – ೧

# ನನ್ನ ದೇಶ – ನನ್ನ ಜನ






ನಮ್ಮ ದೇಶ ಭಾರತ. ನಾವು ಭಾರತೀಯರು. ಇದೊಂದು ಉಪಖಂಡವೂ ಅಹುದು. ಮೂರು ಕಡೆ ಸಮುದ್ರ, ಒಂದು ಕಡೆ ಮಹಾಪರ್ವತ ಇದೆ. ಅದುವೇ ಹಿಮಾಲಯ.

ಈ ದೇಶವನ್ನು 'ಭರತ ಖಂಡ', 'ಹಿಂದೂಸ್ಥಾನ', 'ಇಂಡಿಯಾ' ಎಂದು ಕರೆಯುವರು. ನಮ್ಮ ದೇಶದ ವಿಸ್ತಾರ ೩೩ ಲಕ್ಷ ಚದರ ಕಿಲೋಮೀಟರ್‌ಗಳು. ಇದು ಕಾಶ್ಮೀರದಿಂದ ಕನ್ಯಾಕುಮಾರಿ, ಪಂಜಾಬದಿಂದ ಮಣಿಪುರದವರೆಗೆ ಹಬ್ಬಿದೆ.

ಇಲ್ಲಿ ಹಿಂದೂ, ಮುಸ್ಲಿಂ, ಸಿಖ್, ಕ್ರೈಸ್ತ, ಬೌದ್ಧ, ಜೈನ ಮುಂತಾದ ಮತದವರೂ ಇದ್ದಾರೆ. ಕನ್ನಡ, ಹಿಂದಿ, ಬಂಗಾಳಿ, ಪಂಜಾಬಿ, ಮರಾಠಿ, ತೆಲುಗು, ತಮಿಳು, ಮಲೆಯಾಳಿ ಮುಂತಾದ ಭಾಷೆಗಳನ್ನು ಮಾತನಾಡುವ ಜನರು ಇದ್ದಾರೆ. ಬಹುಧರ್ಮ, ಬಹುಭಾಷೆ, ಬಹುವೇಷ ಹೊಂದಿರುವ ದೊಡ್ಡದೇಶ ನಮ್ಮದು. ಈ ಜನ ಶಾಂತಿಪ್ರಿಯರು. ವಿಶಾಲ ಮನೋಭಾವದವರು. ಜಾತಿ–ಮತ–ಭಾಷೆ ಮೀರಿದವರು.

ಈ ದೇಶದಲ್ಲಿ ಗಂಗಾ, ಯಮುನಾ, ಸಿಂಧೂ, ಕಾವೇರಿ, ಕೃಷ್ಣೆ, ಗೋದಾವರಿ ಮುಂತಾದ ನದಿಗಳು ಹರಿಯುತ್ತಿವೆ. ಬದುಕಿನ ಭೂಮಿಗೆ ನೀರುಣಿಸುತ್ತಿವೆ. ಕರಾವಳಿಯು ಸಾಗರದ ಚೆಲುವಿನಿಂದ ತುಂಬಿದೆ. ದಕ್ಷಿಣಪೀಠಭೂಮಿ ಫಲವತ್ತಾದ ನಾಡು. ಅದನ್ನು ಪಶ್ಚಿಮ ಘಟ್ಟಗಳು, ಪೂರ್ವಘಟ್ಟಗಳು ಸುತ್ತುವರಿದಿವೆ. ಇದು ಹಚ್ಚಹಸಿರಿನ ಕಾಡು. ಇಲ್ಲಿ ಹುಲಿ, ಸಿಂಹ, ಆನೆ, ಜಿಂಕೆ, ಚಿರತೆ ಮುಂತಾದ ವನ್ಯಜೀವಿಗಳು ಇವೆ.

'ಜನಗಣಮನ' ಇದು ನಮ್ಮ ರಾಷ್ಟ್ರಗೀತೆ. ಈ ಗೀತೆಯನ್ನು ಬರೆದವರು ರವೀಂದ್ರನಾಥ ಟಾಗೋರ್. ಇದು ಭಾರತ ದೇಶವನ್ನು ಬಣ್ಣಿಸುತ್ತದೆ ಮತ್ತು ಭಾರತೀಯರಿಗೆ ಜಯವನ್ನು ಕೋರುತ್ತದೆ. 'ವಂದೇ ಮಾತರಂ' ನಮ್ಮ ದೇಶಭಕ್ತಿಗೀತೆ. ಇದನ್ನು ಬರೆದವರು ಬಂಕಿಮಚಂದ್ರ ಚಟರ್ಜಿ. ಇದು ದೇಶ ಪ್ರೇಮ ಸಾರುವ ಗೀತೆಯಾಗಿದೆ.

ನಮ್ಮ ದೇಶದ ಬಾವುಟ ಮೂರು ಬಣ್ಣಗಳಿಂದ ಕೂಡಿದೆ. 'ಕೇಸರಿ' ತ್ಯಾಗದ ಸಂಕೇತ. 'ಬಿಳಿ' ಶಾಂತಿಯ ಪ್ರತೀಕ ಮತ್ತು 'ಹಸಿರು' ಸಮೃದ್ಧಿಯ ಸೂಚಕ. ನಡುವೆ ಇರುವ 'ನೀಲಿ' ಬಣ್ಣದ ಚಕ್ರ ನಮ್ಮ ಧರ್ಮಚಕ್ರ, ಪ್ರಗತಿಯ ಸಂಕೇತ. ಇದುವೆ ನಮ್ಮ ಹೆಮ್ಮೆಯ ಬಾವುಟ.

ಈ ನಾಡಿನ ರಕ್ಷಣೆಗಾಗಿ ಅನೇಕ ಜನ ಬಲಿದಾನ ಮಾಡಿದ್ದಾರೆ. ಅವರುಗಳಲ್ಲಿ ಕಿತ್ತೂರು ಚೆನ್ನಮ್ಮ, ರಾಣಿ ಲಕ್ಷ್ಮೀಬಾಯಿ, ಟಿಪ್ಪು ಸುಲ್ತಾನ್, ಭಗತ್‌ಸಿಂಗ್, ಚಂದ್ರಶೇಖರ ಆಜಾದ ಪ್ರಮುಖರು. ಅನೇಕ ತಾಯಂದಿರು ದೇಶಕ್ಕಾಗಿ ತಮ್ಮ ಮಕ್ಕಳನ್ನೇ ಕೊಡುಗೆಯನ್ನಾಗಿ ನೀಡಿರುವರು. ವಾಲ್ಮೀಕಿ, ವ್ಯಾಸ, ಪಂಪ, ಹರಿಹರ, ರಾಘವಾಂಕ, ಕುಮಾರವ್ಯಾಸ, ಕಬೀರ್ ಮೊದಲಾದ ಕವಿಗಳ ಬೀಡು, ಭಾರತ. ಬುದ್ಧ, ಬಸವ, ಅಲ್ಲಮ, ಗಾಂಧಿ, ಅಂಬೇಡ್ಕರ್ ಮೊದಲಾದ ಮಹಾತ್ಮರ ನಾಡಿದು. ವಿವೇಕಾನಂದ, ಅರವಿಂದರ ಗೂಡಿದು. ಈ ನಾಡಿನ ರೈತ, ಈ ನಾಡಿನ ಸೈನಿಕ ನಮ್ಮ ದೇಶದ ಆಧಾರ ಸ್ತಂಭಗಳು.

* * * *

# ಅಭ್ಯಾಸ

## I. ಪದಗಳ ಅರ್ಥ :

**ಕರಾವಳಿ** – ಸಮುದ್ರದಂಡೆ
**ಘಟ್ಟ** – ಬೆಟ್ಟಗಳ ಸಾಲು
**ಪರ್ವತ** – ದೊಡ್ಡ ಬೆಟ್ಟ
**ಫಲವತ್ತಾದ** – ಸಾರವತ್ತಾದ
**ಬಲಿದಾನ** – ಆಹುತಿ
**ಬಹು** – ಅಧಿಕ; ಅನೇಕ.
**ಬೀಡು** – ನೆಲೆ; ಮನೆ.
**ಮೀರಿದ** – ದಾಟಿದ
**ಸಂಕೇತ** – ಗುರುತು
**ಹಬ್ಬು** – ಹರಡು
**ಕೋರು** – ವಿನಂತಿಸು
**ನಾಡು** – ದೇಶ
**ಪುರಾತನ** – ಹಳೆಯ
**ಪ್ರತೀಕ** – ಪ್ರತಿರೂಪ; ಚಿಹ್ನೆ.
**ಬಣ್ಣಿಸು** – ಹೊಗಳು
**ಬಾವುಟ** – ಪತಾಕೆ; ಧ್ವಜ.
**ಮನೋಭಾವ** – ಮನಸ್ಸಿನ ಭಾವನೆ.
**ವಿಶಾಲ** – ವಿಸ್ತಾರವಾದ; ಅಗಲವಾದ.
**ಸುಳಿವು** – ಸುಳುಹು; ಕುರುಹು; ಜಾಡು.

## II. ಪ್ರಶ್ನೆಗಳು :

**ಅ) ಈ ಕೆಳಗಿನ ಪ್ರಶ್ನೆಗಳಿಗೆ ಒಂದು ಪದ ಅಥವಾ ವಾಕ್ಯದಲ್ಲಿ ಉತ್ತರಿಸಿರಿ.**

೧. ನಮ್ಮ ದೇಶ ಯಾವುದು?
೨. ಭಾರತವನ್ನು ಯಾವ ಯಾವ ಹೆಸರುಗಳಿಂದ ಕರೆಯುತ್ತಾರೆ?
೩. ಭಾರತದಲ್ಲಿ ಹರಿಯುವ ಪ್ರಮುಖ ನದಿಗಳು ಯಾವುವು?
೪. ಭಾರತದಲ್ಲಿ ಕಂಡುಬರುವ ಪ್ರಮುಖ ಕಾಡುಪ್ರಾಣಿಗಳು ಯಾವುವು?
೫. ನಮ್ಮ ರಾಷ್ಟ್ರಗೀತೆ ಯಾವುದು? ಅದನ್ನು ರಚಿಸಿದ ಕವಿ ಯಾರು?
೬. 'ವಂದೇ ಮಾತರಂ' ಗೀತೆಯನ್ನು ರಚಿಸಿದವರು ಯಾರು?
೭. ನಮ್ಮ ರಾಷ್ಟ್ರಧ್ವಜದಲ್ಲಿರುವ ಮೂರು ಬಣ್ಣಗಳಾವುವು?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಭಾರತದಲ್ಲಿ ಯಾವ ಯಾವ ಧರ್ಮದವರಿದ್ದಾರೆ?
೨. ಭಾರತದಲ್ಲಿನ ಜನ ಯಾವ ಯಾವ ಭಾಷೆಗಳನ್ನಾಡುತ್ತಾರೆ?

೩. ಭಾರತೀಯರಲ್ಲಿ ಎಂತಹ ಗುಣ ಸ್ವಭಾವಗಳಿವೆ?

೪. ನಮ್ಮ ರಾಷ್ಟ್ರಧ್ವಜದ ವಿಶೇಷತೆಗಳೇನು?

೫. ದೇಶದ ರಕ್ಷಣೆಗಾಗಿ ಮಡಿದ ವೀರಯೋಧರ ಹೆಸರುಗಳನ್ನು ಬರೆಯಿರಿ.

೬. ದೇಶದ ಪ್ರಮುಖ ಕವಿಗಳು ಹಾಗೂ ಮಹಾತ್ಮರ ಹೆಸರುಗಳನ್ನು ಪಟ್ಟಿಮಾಡಿ.

**ಇ) ಈ ಕೆಳಗಿನ ವಾಕ್ಯಗಳಲ್ಲಿರುವ ದೋಷಗಳನ್ನು ಸರಿಪಡಿಸಿ ಬರೆಯಿರಿ.**

೧. ಭಾರತ ದೇಶದ ದಕ್ಷಿಣಕ್ಕೆ ಹಿಮಾಲಯ ಪರ್ವತ ಇದೆ.

೨. ದಕ್ಷಿಣಪೀಠ ಭೂಮಿಯನ್ನು ಸಮುದ್ರಗಳು ಸುತ್ತುವರಿದಿವೆ.

೩. ನಮ್ಮದು ಬಹುಭಾಷೆ ಹೊಂದಿರುವ ಸಣ್ಣ ದೇಶ.

**ಈ) 'ಅ' ಪಟ್ಟಿಗೆ 'ಬ' ಪಟ್ಟಿಯನ್ನು ಹೊಂದಿಸಿ ಬರೆಯಿರಿ.**

| 'ಅ' ಪಟ್ಟಿ | 'ಬ' ಪಟ್ಟಿ | |
|---|---|---|
| ಅ) ಹಿಮಾಲಯ | ೧) ಸಮುದ್ರ | ...................... |
| ಆ) ಕನ್ನಡ | ೨) ಕವಿ | ...................... |
| ಇ) ಕಾವೇರಿ | ೩) ಪರ್ವತ | ...................... |
| ಈ) ಪಂಪ | ೪) ಧರ್ಮ | ...................... |
| ಉ) ಕ್ರೈಸ್ತ | ೫) ಭಾಷೆ | ...................... |
| | ೬) ನದಿ | ...................... |



**ಉ) ಬಿಟ್ಟಸ್ಥಳಗಳನ್ನು ಕಂಸದಲ್ಲಿ ನೀಡಿರುವ ಪದಗಳಿಂದ ಸರಿಯಾದುದನ್ನು ಆರಿಸಿ ಬರೆಯಿರಿ.**

(ತ್ಯಾಗ, ಮೂರು, ಶಾಂತಿ, ಸಮೃದ್ಧಿ)

೧. ನಮ್ಮ ರಾಷ್ಟ್ರಧ್ವಜವು .............................. ಬಣ್ಣಗಳಿಂದ ಕೂಡಿದೆ.

೨. ಕೇಸರಿ ಬಣ್ಣದ ಸಂಕೇತ ..............................

೩. ಬಿಳಿಯ ಬಣ್ಣದ ಪ್ರತೀಕ ..............................

೪. ಹಸಿರು ಬಣ್ಣದ ಸೂಚಕ ..............................

ಊ) ಇವು ನಮ್ಮ ರಾಷ್ಟ್ರೀಯ ಹೆಗ್ಗುರುತುಗಳು, ಅವುಗಳ ಹೆಸರನ್ನು ಬರೆಯಿರಿ.







---







---

## III. ಭಾಷಾಭ್ಯಾಸ :

ಅ) ಕೆಳಗಿನ ಪದಗಳನ್ನು ಸ್ವಂತವಾಕ್ಯಗಳಲ್ಲಿ ಬಳಸಿ ಬರೆಯಿರಿ.

೧. ಪುರಾತನ : ..........................................................................................

೨. ಸುತ್ತುವರೆ : ..........................................................................................

೩. ಹಚ್ಚಹಸಿರು : ..........................................................................................

೪. ಬಲಿದಾನ : ..........................................................................................

೫. ಬೀಡು : ..........................................................................................

## ಆ) ಈ ಪದಗಳನ್ನು ಓದುತ್ತಾ ಬರೆಯಿರಿ.

| | | | | | |
|---|---|---|---|---|---|
| ೧. | ಉಪಖಂಡ | ಹಿಂದೂಸ್ಥಾನ | ಸಂಕೇತ | ಘಟ್ಟ | ಸಮೃದ್ಧಿ |
| | | | | | |
| | | | | | |
| | | | | | |
| | | | | | |
| ೨. | ರಾಘವಾಂಕ | ಅಲ್ಲಮ | ಅಬ್ಬಕ್ಕ | ಹಚ್ಚಹಸಿರು | ಕಿತ್ತೂರು |
| | | | | | |
| | | | | | |
| | | | | | |
| | | | | | |
| ೩. | ಕಾಶ್ಮೀರ | ಕನ್ಯಾಕುಮಾರಿ | ಧರ್ಮ | ಕೃಷ್ಣ | ರಾಷ್ಟ್ರ |
| | | | | | |
| | | | | | |
| | | | | | |
| | | | | | |

## ಪೂರಕ ಓದು :

**(ಈ ಪದ್ಯವನ್ನು ರಾಗಬದ್ಧವಾಗಿ ಹಾಡಿರಿ ಹಾಗೂ ಪ್ರಸ್ತುತ ಗದ್ಯದಲ್ಲಿನ ವಿಚಾರಗಳೊಂದಿಗೆ ಇರುವ ಸಾಮ್ಯತೆಯನ್ನು ಗಮನಿಸಿರಿ.)**

### ಈ ಮಣ್ಣು ನಮ್ಮದು

ಈ ಮಣ್ಣು ನಮ್ಮದು
ಈ ಗಾಳಿ ನಮ್ಮದು
ಕಲಕಲನೆ ಹರಿಯುತಿಹ ನೀರು ನಮ್ಮದು
ಕಣಕಣದಲು ಭಾರತೀಯ ರಕ್ತ ನಮ್ಮದು ॥ ಪ ॥

ನಮ್ಮ ಕಾಯ್ವ ಹಿಮಾಲಯವು ತಂದೆ ಸಮಾನ
ಗಂಗೆ ತುಂಗೆ ಕಾವೇರಿಯು ತಾಯಿ ಸಮಾನ
ಈ ದೇಶದ ಜನರೆಲ್ಲರೂ ಸೋದರ ಸಮಾನ
ಈ ನಾಡಿನ ಹೃದಯವದು ದೈವ ಸನ್ನಿಧಾನ ॥ ೧ ॥

ಅಜಂತ ಎಲ್ಲೋರ ಹಳೇಬೀಡು ಬೇಲೂರು
ಶಿಲೆಗಳಿವು ಕಲೆಯ ಆಗರ
ಹಿಂದೂ, ಬೌದ್ಧ, ಜೈನ, ಕ್ರೈಸ್ತ, ಮುಸಲ್ಮಾನ
ಧರ್ಮಗಳ ಮಹಾಸಾಗರ ॥ ೨ ॥

ತಂಗಾಳಿಗೆ ತಲೆದೂಗುವ ಪೈರಿನ ಹಾಡು
ಆ ಹಾಡಿಗೆ ತಾಳ ಕೊಡುವ ಯಂತ್ರದ ಜಾಡು
ವಿಜ್ಞಾನವು ಅಜ್ಞಾನವ ಗೆಲ್ಲುವ ಹಾಡು
ಹೊಸ ಭಾರತ ನಿರ್ಮಾಣವು ಸಾಗಿದೆ ನೋಡು ॥ ೩ ॥

– ಆರ್. ಎನ್. ಜಯಗೋಪಾಲ್

## IV. ಸೈದ್ಧಾಂತಿಕ ವ್ಯಾಕರಣ :

### ೧. ಕನ್ನಡ ವರ್ಣಮಾಲೆ.

ಮಕ್ಕಳೇ.... ನಾವು ಮಾತನಾಡುವ ಭಾಷೆ ಕನ್ನಡ. ಈ ಕನ್ನಡ ಭಾಷೆಯಲ್ಲಿ ೪೯ ಅಕ್ಷರಗಳಿವೆ. ಅವುಗಳನ್ನು ನೀವು ಸರಿಯಾಗಿ ಬರೆಯುವುದನ್ನು ಹಾಗೂ ಉಚ್ಚಾರಣೆ ಮಾಡುವುದನ್ನು ಕಲಿತರೆ ಕನ್ನಡ ಭಾಷೆಯನ್ನು ಬಹು ಸುಲಭವಾಗಿ ಕಲಿಯಬಹುದು. ಕೆಳಗೆ ನೀಡಲಾಗಿರುವ ಕನ್ನಡ ವರ್ಣಮಾಲೆಯನ್ನು ಗಮನಿಸಿ, ಅವುಗಳನ್ನು ಸರಿಯಾಗಿ ಉಚ್ಚರಿಸಿರಿ.

ಅ ಆ ಇ ಈ ಉ ಊ ಋ ಎ ಏ ಐ ಒ ಓ ಔ ಅಂ ಅಃ

ಕ ಖ ಗ ಘ ಙ

ಚ ಛ ಜ ಝ ಞ

ಟ ಠ ಡ ಢ ಣ

ತ ಥ ದ ಧ ನ

ಪ ಫ ಬ ಭ ಮ

ಯ ರ ಲ ವ ಶ ಷ ಸ ಹ ಳ

### ೨. ಕನ್ನಡ ವರ್ಣಮಾಲೆಯ ಮೂಲಾಕ್ಷರಗಳನ್ನು ಸರಿಯಾಗಿ ಗಮನಿಸಿ ಉಚ್ಚರಿಸಿರಿ.

ಅ ಆ ಇ ಈ ಉ ಊ ಋ ಎ ಏ ಐ ಒ ಓ ಔ

– ಇವು ಸ್ವರಗಳು = ೧೩

ಅಂ ಅಃ – ಯೋಗವಾಹಗಳು = ೦೨

ಕ್ ಖ್ ಗ್ ಘ್ ಙ್

ಚ್ ಛ್ ಜ್ ಝ್ ಞ್

ಟ್ ಠ್ ಡ್ ಢ್ ಣ್

ತ್ ಥ್ ದ್ ಧ್ ನ್

ಪ್ ಫ್ ಬ್ ಭ್ ಮ್ – ವರ್ಗೀಯ ವ್ಯಂಜನಗಳು = ೨೫

ಯ್ ರ್ ಲ್ ವ್ ಶ್ ಷ್ ಸ್ ಹ್ ಳ್ – ಅವರ್ಗೀಯ ವ್ಯಂಜನಗಳು = ೦೯

**ಕನ್ನಡ ವರ್ಣಮಾಲೆಯ ಮೂಲಾಕ್ಷರಗಳು ಒಟ್ಟು = ೪೯**



## ಪದ್ಯ ಪಾಠ – ೨




# ಕನ್ನಡ ನುಡಿ

ಮಕ್ಕಳೆ ಬನ್ನಿರಿ ಮಾತೊಂದು ಹೇಳುವೆ
ಚಿತ್ತವನಿಟ್ಟು ಆಲಿಸಿರಿ ॥ ಪ ॥

ಕನ್ನಡ ನುಡಿಯಲಿ ಕನ್ನಡ ಗುಡಿಯಲಿ
ಹೃದಯದ ಒಲುಮೆಯು ತುಂಬಿಹುದು
ಹಾಲಿನ ತೊರೆಯು ಸಕ್ಕರೆ ಮಳಲು
ಜೇನಿನ ಹನಿಯು ಅಲ್ಲಿಹುದು

ಪುಣ್ಯಕೋಟಿಯ ಬದುಕಿನ ಚರಿತೆಯು
ಜನಪದದಲ್ಲಿ ಮೂಡಿಹುದು
ಸಂಚಿಹೊನ್ನಮ್ಮನ ಹದಿಬದೆಧರ್ಮವು
ಥಳಥಳ ಅದರಲಿ ಹೊಳೆಯುವುದು

ಶರಣರು ರಚಿಸಿದ ವಚನಗಳೆಲ್ಲವು
ಬದುಕಿನ ಅಮೃತ ಕಣಜಗಳು
ದಾಸರ ನುಡಿಯಲಿ ಅರಳಿದ ಚೆಲುವು
ಕನ್ನಡದೊಲುಮೆಯ ಹವಳಗಳು

ಬನ್ನಿರಿ ಮಕ್ಕಳೆ ಕನ್ನಡ ಕಲಿಯಿರಿ
ಬದುಕಿನ ತಿರುಳನು ಅರಿಯುತ್ತ
ನಮ್ಮಯ ನಾಡಿನ ಪುಣ್ಯದ ಬೀಡಿನ
ನನ್ನಿಯ ಕಥೆಯನು ಬರೆಯುತ್ತ.

– ಎ. ಕೆ. ರಾಮೇಶ್ವರ

## ಕೃತಿಕಾರರ ಪರಿಚಯ :



**ಎ. ಕೆ. ರಾಮೇಶ್ವರ** ಅವರು ವಿಜಯಪುರ ಜಿಲ್ಲೆಯ ವದಾನುಹಟ್ಟಿ ಗ್ರಾಮದಲ್ಲಿ ೧೯೩೪ ರಲ್ಲಿ ಜನಿಸಿದರು. ಬಾಲ್ಯದ ಶಿಕ್ಷಣವನ್ನು ಹುಟ್ಟೂರಲ್ಲಿ ಮುಗಿಸಿ, ಹೆಚ್ಚಿನ ಶಿಕ್ಷಣಕ್ಕಾಗಿ ಸಮೀಪದ ಧಾರವಾಡಕ್ಕೆ ಆಗಮಿಸಿದರು. ಬಡತನದ ಕಾರಣ ಶಿಕ್ಷಣ ಅರ್ಧಕ್ಕೆ ನಿಲ್ಲಿಸಿ ಕಲಬುರಗಿ ಜಿಲ್ಲೆಯಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಸೇವಾ ನಿರತರಾದರು. ಇವರು ಉತ್ತಮ ಶಿಕ್ಷಕರೆಂದು ರಾಜ್ಯಪ್ರಶಸ್ತಿ, ರಾಷ್ಟ್ರಪ್ರಶಸ್ತಿ ಪಡೆದಿದ್ದಾರೆ.

ಇವರು ಮಕ್ಕಳಿಗಾಗಿ ಕಥೆ, ಕವನ, ನಾಟಕ, ಜೀವನ ಚರಿತ್ರೆ ಹಾಗೂ ಪ್ರಬಂಧಗಳನ್ನು ಬರೆದು ಮಕ್ಕಳ ಕವಿಯೆಂದೇ ಪ್ರಸಿದ್ಧರಾಗಿರುವರು. ಇವರಿಗೆ ೨೦೦೦ ದ ಸಾಲಿನಲ್ಲಿ ರಾಜ್ಯೋತ್ಸವ ಪ್ರಶಸ್ತಿ ಲಭಿಸಿದೆ.

ಪ್ರಸ್ತುತ 'ಕನ್ನಡ ನುಡಿ' ಕವಿತೆ ಅವರ ಸಮಗ್ರ ಮಕ್ಕಳ ಕವನ ಸಂಕಲನದಿಂದ ಆಯ್ಕೆ ಮಾಡಿಕೊಳ್ಳಲಾಗಿದೆ.



## ಟಿಪ್ಪಣಿ :

೧. **ಪುಣ್ಯಕೋಟಿ** : ಸತ್ಯಕ್ಕಾಗಿ ಬದುಕಿದ ಗೋವಿನ ಹೆಸರು. ಇದು ಜಾನಪದ ಕಥೆ.

೨. **ಸಂಚಿಹೊನ್ನಮ್ಮ** : ಒಬ್ಬ ಕವಯಿತ್ರಿ, ಹದಿಬದೆಧರ್ಮ ಎಂಬ ಕಾವ್ಯವನ್ನು ಬರೆದವರು.

೩. **ಹವಳ** : ನವರತ್ನಗಳಲ್ಲಿ ಒಂದು, ಸಮುದ್ರದ ಜೀವಿಯಿಂದ ಉತ್ಪನ್ನವಾಗುವ ಒಂದು ಕಠಿಣ ಪದಾರ್ಥ.

೪. **ಶರಣರು** : ೧೨ ನೇ ಶತಮಾನದಲ್ಲಿ ಬಾಳಿ ಬದುಕಿದ ಬಸವಣ್ಣನವರ ತತ್ವಾನುಯಾಯಿಗಳು. ಇವರು ಸಮಾಜದ ಮೌಢ್ಯತೆಗಳನ್ನು ಹೋಗಲಾಡಿಸಿ ವೈಚಾರಿಕ ಅರಿವನ್ನು ಮೂಡಿಸುವ ದಿಸೆಯಲ್ಲಿ ಸಾವಿರಾರು ವಚನಗಳನ್ನು ಸರಳಗನ್ನಡದಲ್ಲಿ ರಚಿಸಿದ್ದಾರೆ.

೫. **ದಾಸರು** : ೧೫ ಶತಮಾನದಲ್ಲಿ ಕಂಡು ಬರುವ ಇವರು ಹರಿಭಕ್ತರು. ಇವರು ರಚಿಸಿದ ಸಾಹಿತ್ಯವನ್ನು ಕೀರ್ತನೆಗಳು ಎಂದು ಕರೆಯಲಾಗುತ್ತದೆ.

೬. **ಜನಪದ** : ಅಕ್ಷರ ಜ್ಞಾನವಿಲ್ಲದ ಶ್ರೀಸಾಮಾನ್ಯರು ಕಟ್ಟಿದ ಹಾಡು, ಕಥೆ, ಆಚರಣೆ, ನೃತ್ಯ, ಕಲೆ ಇತ್ಯಾದಿಗಳನ್ನು ಒಳಗೊಂಡ ಗ್ರಾಮೀಣ ಸಂಸ್ಕೃತಿ.

# ಅಭ್ಯಾಸ

## I. ಪದಗಳ ಅರ್ಥ :

**ಅರಿ** – ತಿಳಿ; ಗ್ರಹಿಸು.
**ಆಲಿಸು** – ಮನಸ್ಸಿಟ್ಟು ಕೇಳು
**ಕಣಜ** – ಧಾನ್ಯ ಸಂಗ್ರಹಣ ಸ್ಥಳ.
**ಚಿತ್ತ** – ಮನಸ್ಸು
**ತಿರುಳು** – ಸತ್ವ; ಸಾರ.
**ನನ್ನಿ** – ಪ್ರೀತಿ; ಸತ್ಯ.
**ಮಳಲು** – ಮರಳು
**ಅಮೃತ** – ಪವಿತ್ರವಾದುದು.
**ಒಲುಮೆ** – ಪ್ರೀತಿ
**ಗುಡಿ** – ಪವಿತ್ರ ಸ್ಥಳ; ದೇವಾಲಯ.
**ತಾಯಿನುಡಿ** – ಮಾತೃಭಾಷೆ
**ತೊರೆ** – ಚಿಕ್ಕಹೊಳೆ
**ನುಡಿ** – ಭಾಷೆ

## II. ಪ್ರಶ್ನೆಗಳು :

**ಅ) 'ಅ' ಪಟ್ಟಿಯನ್ನು 'ಬ' ಪಟ್ಟಿಯೊಂದಿಗೆ ಹೊಂದಿಸಿ ಬರೆಯಿರಿ.**

| 'ಅ' ಪಟ್ಟಿ | 'ಬ' ಪಟ್ಟಿ | |
|---|---|---|
| ೧. ಪುಣ್ಯಕೋಟಿ | ಅ) ಕೀರ್ತನೆಗಳು | ........................ |
| ೨. ಹದಿಬದೆಯಧರ್ಮ | ಆ) ಗೋವು | ........................ |
| ೩. ದಾಸರು | ಇ) ವಚನಗಳು | ........................ |
| ೪. ಶರಣರು | ಈ) ಸಂಚಿಯಹೊನ್ನಮ್ಮ | ........................ |
| | ಉ) ಹೃದಯದ ಒಲುಮೆ | ........................ |

**ಆ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಕವಿ ತನ್ನ ಮಾತುಗಳನ್ನು ಹೇಗೆ ಆಲಿಸಬೇಕೆಂದು ಮಕ್ಕಳಿಗೆ ಕರೆ ನೀಡಿದ್ದಾರೆ?
೨. ಕನ್ನಡದ ನುಡಿಯಲ್ಲಿ ಏನು ತುಂಬಿದೆ?
೩. ಜಾನಪದದಲ್ಲಿ ಮೂಡಿದ ಸತ್ಯದ ಬದುಕಿನ ಚರಿತ್ರೆ ಯಾವುದು?
೪. ಹದಿಬದೆಧರ್ಮ ಗ್ರಂಥವನ್ನು ಬರೆದವರು ಯಾರು?

೫. ಶರಣರು ರಚಿಸಿದ ಸಾಹಿತ್ಯ ಯಾವುದು?

೬. ಕನ್ನಡದೊಲುಮೆಯ ಹವಳಗಳು ಯಾವುವು?

೭. 'ಕನ್ನಡ ನುಡಿ' ಕವಿತೆಯನ್ನು ಬರೆದ ಕವಿಯ ಹೆಸರು ಏನು?

**ಇ) ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಕನ್ನಡದ ನುಡಿಯಲ್ಲಿ ಏನೇನು ಅಡಗಿದೆ?

೨. ಪುಣ್ಯಕೋಟಿ ಕಥೆಯು ಏನನ್ನು ತಿಳಿಸುತ್ತದೆ?

೩. ಕವಿಯು ಶರಣರ ವಚನಗಳನ್ನು ಏನೆಂದು ಬಣ್ಣಿಸಿದ್ದಾರೆ?

೪. ದಾಸಸಾಹಿತ್ಯವನ್ನು ಕವಿ ಯಾವ ರೀತಿ ಬಣ್ಣಿಸಿದ್ದಾರೆ?

೫. 'ಮಕ್ಕಳೆ ಕನ್ನಡ ಕಲಿಯಿರಿ' ಎಂದು ಕವಿ ಏಕೆ ಒತ್ತಾಯಿಸುತ್ತಾರೆ?

## III. ಭಾಷಾಭ್ಯಾಸ :

**ಅ) ಈ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಉಪಯೋಗಿಸಿರಿ.**

೧. ಚಿತ್ತ : ..........................................................................................

೨. ಒಲುಮೆ : ..........................................................................................

೩. ಜನಪದ : ..........................................................................................

೪. ಕಣಜ : ..........................................................................................

೫. ತಿರುಳು : ..........................................................................................



**ಆ) ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದ ಬರೆಯಿರಿ.**

**ಮಾದರಿ : ಪುಣ್ಯ** x **ಪಾಪ**

೧. ಮೂಡು x ....................................

೨. ಧರ್ಮ x ....................................

೩. ಅರಳು x ....................................

**ಇ) ಈ ನುಡಿಯಲ್ಲಿ ಗೆರೆ ಹಾಕಿದ ಪ್ರಾಸ ಪದಗಳನ್ನು ಹುಡುಕಿ ಜೋಡಿಸಿ ಬರೆಯಿರಿ.**

ಕನ್ನಡ ನುಡಿಯಲಿ ಕನ್ನಡ ಗುಡಿಯಲಿ

ಹೃದಯದ ಒಲುಮೆಯು ತುಂಬಿಹುದು

ಹಾಲಿನ ತೊರೆಯು ಸಕ್ಕರೆ ಮಳಲು

ಜೇನಿನ ಹನಿಯು ಅಲ್ಲಿಹುದು

**ಮಾದರಿ :-** **ನುಡಿಯಲಿ** **ಗುಡಿಯಲಿ**

.................... ....................

.................... ....................



**ಈ) ಕೆಳಗಿನ ವಾಕ್ಯಗಳಲ್ಲಿನ ದೋಷಯುಕ್ತ ಪದಗಳನ್ನು ಸರಿಪಡಿಸಿ ಬರೆಯಿರಿ.**

೧. ಕನ್ನಡ ಎಡೆಯಲಿ ಕನ್ನಡ ಗಡಿಯಲಿ ಹೃದಯದ ಒಲುಮೆ.

..........................................................................................................

೨. ಪಾಪಕೋಟಿಯ ಬದುಕಿನ ಚರಿತೆಯು ಜನಪದದಲ್ಲಿ ಮೂಡಿಹುದು.

..........................................................................................................

೩. ಬನ್ನಿರಿ ಮಕ್ಕಳೆ ಕನ್ನಡ ಕುಡಿಯಿರಿ ಬದುಕಿನ ತಿರುಳನು ಅರಿಯುತ್ತ.

..........................................................................................................

೪. ನಮ್ಮಯ ನಾಡಿನ ಪುಣ್ಯದ ಬೀಡಿನ ನಿನ್ನಯ ಕಥೆಯನು ಬರೆಯುತ್ತ.

..........................................................................................................

ಉ) ಈ ಪದಗಳನ್ನು ನಕಲು ಮಾಡಿ ಬರೆಯಿರಿ.

| ಚಿತ್ತ | ಸಕ್ಕರೆ | ಪುಣ್ಯ | ಅಮೃತ | ನನ್ನಿ | ಹೃದಯ | ಒಲುಮೆ |
|---|---|---|---|---|---|---|
| ............ | ............ | .............. | .............. | ........... | .............. | .............. |
| ............ | ............ | .............. | .............. | ........... | .............. | .............. |
| ............ | ............ | .............. | .............. | ........... | .............. | .............. |

ಊ) ಈ ಪದಗಳಿಗೆ ಏಕವಚನದ ರೂಪ ಬರೆಯಿರಿ.

**ಮಾದರಿ : ಮಕ್ಕಳು – ಮಗು**

| ಬಹುವಚನ | ಏಕವಚನ |
|---|---|
| ೧. ಗುಡಿಗಳು | ........................... |
| ೨. ತೊರೆಗಳು | ........................... |
| ೩. ಶರಣರು | ........................... |
| ೪. ಹವಳಗಳು | ........................... |

## IV. ಚಟುವಟಿಕೆಗಳು :

೧. ಸುಳಿವು ಪದ ಉಪಯೋಗಿಸಿ ಕವಿತೆ ಕಟ್ಟಿರಿ.

**ಮಾದರಿ :** ನಮ್ಮ ನಾಡು ಕನ್ನಡ

ನಮ್ಮ ..................................... ಕನ್ನಡ

ನಮ್ಮ ..................................... ಕನ್ನಡ

ನಮ್ಮ ..................................... ಕನ್ನಡ

ನಮ್ಮ ..................................... ಕನ್ನಡ

(**ಸುಳಿವು ಪದಗಳು :** ಭಾಷೆ, ಉಸಿರು, ದೈವ, ಬೀಡು)

೨. **ಪಣ್ಯಕೋಟಿ ಹಾಡಿನ ಕಥೆಯನ್ನು ಕೇಳಿ ತಿಳಿದುಕೊಳ್ಳಿರಿ.**

೩. **ಶರಣರ ವಚನ ಹಾಗೂ ದಾಸರ ಕೀರ್ತನೆಗಳನ್ನು ಕಂಠಪಾಠ ಮಾಡಿರಿ.**

೪. **ಕನ್ನಡ ನಾಡು ನುಡಿಯನ್ನು ಕುರಿತ ನಿಮ್ಮ ಭಾವನೆಗಳನ್ನು ಟಿಪ್ಪಣಿ ರೂಪದಲ್ಲಿ ಬರೆಯಿರಿ.**

೫. **ಈ ಕೆಳಗಿನ ಪದ್ಯಗಳನ್ನು ಓದಿ ಇವುಗಳ ಭಾವಾರ್ಥ ತಿಳಿದುಕೊಳ್ಳಿರಿ.**

ಸುಲಿದ ಬಾಳೆಯ ಹಣ್ಣಿನಂದದಿ
ಕಳೆದ ಸಿಗುರಿನ ಕಬ್ಬಿನಂದದಿ
ಅಳಿದ ಉಷ್ಣದ ಹಾಲಿನಂದದಿ
ಲಲಿತವಾಗಿಹುದು ಕನ್ನಡದ ನುಡಿಯು

– **ಮಹಾಲಿಂಗರಂಗ**

ಕನ್ನಡಮ್ಮನ ಮಕ್ಕಳು ನಾವು
ಪ್ರೀತಿಯ ಗಂಧವ ಸೂಸುವೆವು
ಸಮರಸದಲ್ಲಿ ಹೃದಯವ ಬೆಸೆದು
ನಾಡಿನ ಸಿರಿಯನು ಬೆಳಗುವೆವು

– **ದೊಡ್ಡಣ್ಣ ಗದ್ದನಕೇರಿ**





## ಗದ್ಯ ಪಾಠ – ೩

# ನವಿಲು






ಜುಳು ಜುಳು ಹರಿಯುವ ನದಿ. ಹಚ್ಚ ಹಸಿರಿನ ಮೈದಾನ. ಕರಿಮೋಡದ ಅಲೆಗಳು. ತಣ್ಣನೆಯ ಗಾಳಿ. ಆಕಾಶದಲ್ಲಿ ಬಣ್ಣ ಬಣ್ಣದ ಕಾಮನಬಿಲ್ಲು. ಜಿನುಗುವ ಸೋನೆ ಮಳೆ. ಆಗ ಹಕ್ಕಿಯೊಂದು ರೆಕ್ಕೆ ಬಿಚ್ಚಿ ಕುಣಿಯಲು ಆರಂಭಿಸಿತು. ಉದ್ದವಾದ ಗರಿ ಕೆದರಿತು. ಅದು ಬಣ್ಣ ಬಣ್ಣದ ಬೀಸಣಿಕೆಯಂತೆ ಕಾಣುತ್ತಿದೆ. ಕತ್ತನ್ನು ಅತ್ತ ಇತ್ತ ತಿರುಗಿಸುತ್ತಿದೆ. ಅದರ ಗರಿಗಳಲ್ಲಿ ಸಾವಿರಾರು ಕಣ್ಣುಗಳು. ಅವು ಫಳ ಫಳ ಹೊಳೆಯುತ್ತಿವೆ. ಅದು ಥಕ ಥೈ ಎಂದು ಕುಣಿಯುತ್ತಿದೆ. ಅದರ ಸುಂದರತೆಯನ್ನು ರಂಗು ರಂಗಿನ ತುರಾಯಿ ಹೆಚ್ಚಿಸಿದೆ. ಯಾವುದೀ ಹಕ್ಕಿ? ಅದೇ ನವಿಲು ಅಲ್ಲವೇ?

ನವಿಲನ್ನು ಮಯೂರ, ಶಿಖಿ, ಸಹಸ್ರಾಕ್ಷ ಎಂದು ಕರೆಯುತ್ತಾರೆ. ನವಿಲುಗರಿಯಲ್ಲಿ ಹೊಳಪುಳ್ಳ ಕಣ್ಣಿದೆ. ಅದು ಹಸಿರು ಮಿಶ್ರಿತ ನೀಲಿ ಬಣ್ಣದಿಂದ ಸಿಂಗಾರಗೊಂಡಿದೆ. ಅದರ ಸುತ್ತ ತಾಮ್ರಮಿಶ್ರಿತ ಬಂಗಾರ ವರ್ಣದ ಉಂಗುರ ಚಮಕಿಸುತ್ತಿದೆ. ಈ ಗರಿಯ ನೋಟ ಮನಸ್ಸನ್ನು ಸೆಳೆಯುತ್ತಿದೆ. ಆದ್ದರಿಂದ ನವಿಲನ್ನು ಸಾವಿರ ಕಣ್ಣುಳ್ಳ ಸಹಸ್ರಾಕ್ಷ ಎಂದು ಕರೆಯುತ್ತಾರೆ.

ಕವಿಗಳು ಅದರ ರೂಪ ಲಾವಣ್ಯಕ್ಕೆ ಮನಸೋತಿದ್ದಾರೆ. ಅನೇಕರು ಕವಿತೆ ರಚಿಸಿದ್ದಾರೆ. ಇದು ಸೌಂದರ್ಯದ ಸಂಕೇತ. ಆದ ಕಾರಣವೇ ಇದು 'ರಾಷ್ಟ್ರಪಕ್ಷಿ' ಎಂಬ ಗೌರವ ಹೊಂದಿದೆ. ಇದನ್ನು ಹಿಂಸಿಸುವುದು, ಕೊಲ್ಲುವುದು ಅಪರಾಧವಾಗಿದೆ.

ನವಿಲು ಷಣ್ಮುಖನ ವಾಹನ. ನವಿಲು ಗರಿ ಮುರಳಿ ಮೋಹನನ ಜುಟ್ಟಿನ ಅಲಂಕಾರವೂ ಅಹುದು. ನವಿಲಿನ ನರ್ತನ ಕಂಡ ಕಲಾವಿದರು, ಮಯೂರ ನಾಟ್ಯವೆಂಬ ಕಲಾಪ್ರಕಾರವನ್ನೇ ಸೃಷ್ಟಿಸಿದ್ದಾರೆ. ನವಿಲಿನ ಕುಣಿತ ನಯನ ಮನೋಹರ. ಹೆಣ್ಣಿಗಿಲ್ಲದ ರೂಪ ಗಂಡಿಗಿದೆ. ಇದೇ ನವಿಲಿನ ವಿಶೇಷ! ಹೆಣ್ಣು ನವಿಲಿನ ಪುಕ್ಕಗಳು ಚಿಕ್ಕವು.

ನವಿಲು ಜಗತ್ತಿನ ಎಲ್ಲ ಪ್ರದೇಶಗಳಲ್ಲಿ ವಾಸಿಸುತ್ತದೆ. ಭಾರತ ಮತ್ತು ಶ್ರೀಲಂಕಾ ದೇಶಗಳಲ್ಲಿ ನವಿಲಿನ ಬಣ್ಣ ನೀಲಿ ಛಾಯೆ. ಜಾವ ಮತ್ತು ಮಯನ್ಮಾರ ದೇಶಗಳಲ್ಲಿ ಹಸಿರು ಛಾಯೆ ಹೊಂದಿರುತ್ತವೆ. ಇವು ಹಿಂಡು ಹಿಂಡಾಗಿ ವಾಸಿಸುತ್ತವೆ. ಇವು ೧೫ ವರ್ಷ ಜೀವಿಸಬಲ್ಲವು. ಗುಡ್ಡದ ಹುಲ್ಲುಗಾವಲುಗಳಲ್ಲಿ, ನದಿ, ಕೆರೆ, ಹೊಳೆ, ಹಳ್ಳ ಇರುವಲ್ಲಿ ಇವು ಹೆಚ್ಚು ಇರುತ್ತವೆ.

ನವಿಲು ನೋಡಲು ಎಷ್ಟು ಸುಂದರವೋ ಅಷ್ಟೇ ಶಿಸ್ತಿನ ಸಿಪಾಯಿ; ಉಪಕಾರಿಯೂ ಹೌದು. ಇದು ರೈತ ಮಿತ್ರ. ಬೆಳೆದ ಫಸಲಿಗೆ ಕೀಟಬಾಧೆ ತಗುಲದಂತೆ ಬೆಳೆಗಳ ರಕ್ಷಣೆ ಮಾಡುತ್ತದೆ. ಕೀಟಗಳನ್ನು ತಿನ್ನುತ್ತದೆ. ನವಿಲು ಇರುವ ಪ್ರದೇಶದಲ್ಲಿ ಹಾವುಗಳು ಸುಳಿಯಲಾರವು.

* * * *



## ಅಭ್ಯಾಸ

### I. ಪದಗಳ ಅರ್ಥ :

**ಅಲೆ** – ತೆರೆ
**ಕತ್ತು** – ಕೊರಳು
**ಕೊಂಕು** – ಡೊಂಕು
**ಛಾಯೆ** – ನೆರಳು
**ತುರಾಯಿ** – ಹಕ್ಕಿಗಳ ಜುಟ್ಟು
**ನಯನ** – ಕಣ್ಣು; ಅಕ್ಷಿ; ನೇತ್ರ.
**ಆವಾಸ** – ನೆಲೆ; ಮನೆ.
**ಕಮಾನು** – ಅರ್ಧಚಂದ್ರಾಕೃತಿಯ ರಚನೆ.
**ಚಮಕಿಸು** – ಹೊಳಪು
**ಜಿನುಗು** – ತೊಟ್ಟಿಕ್ಕು
**ನರ್ತನ** – ಕುಣಿತ
**ಬಾಧೆ** – ತೊಂದರೆ; ನೋವು; ಅಡ್ಡಿ.

**ಮನೋಹರ** – ಸುಂದರ
**ಮುರುಳಿ** – ಕೊಳಲು
**ರಾಷ್ಟ್ರಪಕ್ಷಿ** – ರಾಷ್ಟ್ರಗೌರವಕ್ಕೆ ಪಾತ್ರವಾದ ಪಕ್ಷಿ.
**ವರ್ಣ** – ಬಣ್ಣ
**ಸಿಪಾಯಿ** – ಸೈನಿಕ; ಯೋಧ.
**ಹಿಂಡು** – ಗುಂಪು
**ಮುರುಳಿ ಮೋಹನ** – ಕೃಷ್ಣ.
**ಮೋಹನ** – ಆಕರ್ಷಣೆ; ಸೆಳೆತ.
**ಲಾವಣ್ಯ** – ಸೊಗಸು; ಒಯ್ಯಾರ.
**ಶಿಖಿ** – ನವಿಲಿನ ತಲೆ ಮೇಲಿನ ಜುಟ್ಟು.
**ಸಹಸ್ರಾಕ್ಷ** – ಸಾವಿರ ಕಣ್ಣು
**ಹುಲ್ಲುಗಾವಲು** – ಹುಲ್ಲಿನ ಮೈದಾನ

## II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ನವಿಲಿನ ಕಣ್ಣುಗಳು ಹೇಗೆ ಹೊಳೆಯುತ್ತವೆ?
೨. ನವಿಲು ಯಾವ ರೀತಿ ಕುಣಿಯುತ್ತದೆ?
೩. ನವಿಲಿಗೆ ಇರುವ ಇತರ ಹೆಸರುಗಳಾವುವು?
೪. ಕವಿಗಳು ನವಿಲನ್ನು ಕುರಿತು ಏಕೆ ಕವಿತೆ ರಚಿಸುತ್ತಾರೆ?
೫. ನವಿಲಿಗೆ ಭಾರತದಲ್ಲಿ ಯಾವ ಗೌರವ ಲಭಿಸಿದೆ?
೬. ನವಿಲಿಗೆ ಸಂಬಂಧಿಸಿದ ನಾಟ್ಯಪ್ರಕಾರ ಯಾವುದು?
೭. ನವಿಲುಗರಿ ಯಾರ ಜುಟ್ಟಿನ ಅಲಂಕಾರವಾಗಿ ಬಳಕೆಯಾಗಿದೆ?
೮. ನೀಲಿ ಬಣ್ಣದ ನವಿಲುಗಳು ಯಾವ ದೇಶಗಳಲ್ಲಿ ಕಂಡುಬರುತ್ತವೆ?



**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ನವಿಲು ಎಂತಹ ಸಂದರ್ಭದಲ್ಲಿ ಕುಣಿಯುತ್ತದೆ?
೨. ನವಿಲು ಕುಣಿಯುವ ರೀತಿಯನ್ನು ವರ್ಣಿಸಿ.
೩. ನವಿಲಿನ ಗರಿಯ ವಿಶೇಷತೆಗಳೇನು?
೪. ನವಿಲನ್ನು ಸಹಸ್ರಾಕ್ಷ ಎಂದು ಏಕೆ ಕರೆಯುವರು?
೫. ಗಂಡು ನವಿಲಿನ ವಿಶೇಷತೆ ಏನು?
೬. ನವಿಲು ವಾಸಿಸುವ ಸ್ಥಳಗಳಾವುವು?
೭. ನವಿಲನ್ನು ರೈತಮಿತ್ರ ಎಂದು ಏಕೆ ಕರೆಯುತ್ತಾರೆ?

## ಇ) 'ಅ' ಪಟ್ಟಿಗೆ 'ಬ' ಪಟ್ಟಿಯನ್ನು ಹೊಂದಿಸಿ ಬರೆಯಿರಿ.

| 'ಅ' ಪಟ್ಟಿ | 'ಬ' ಪಟ್ಟಿ | |
|---|---|---|
| ಅ) ರೈತಮಿತ್ರ | ೧) ಹೊಳಪು | ................................ |
| ಆ) ತುರಾಯಿ | ೨) ನವಿಲು | ................................ |
| ಇ) ಮನೋಹರ | ೩) ಕಾಮನಬಿಲ್ಲು | ................................ |
| ಈ) ಆಕಾಶ | ೪) ಜುಟ್ಟು | ................................ |
| ಉ) ಚಮಕಿಸು | ೫) ಸುಂದರ | ................................ |

## ಈ) ಬಿಟ್ಟ ಸ್ಥಳಗಳನ್ನು ನೀಡಿರುವ ನಾಲ್ಕು ಉತ್ತರಗಳಲ್ಲಿ ಸರಿಯಾದುದನ್ನು ಆರಿಸಿ ಬರೆಯಿರಿ.

೧) ಷಣ್ಮುಖನ ವಾಹನ ...........................

ಅ) ನಂದಿ ಬ) ಕುದುರೆ
ಕ) ನವಿಲು ಡ) ಗರುಡ

೨) ನವಿಲು ನೋಡಲು ಎಷ್ಟು ಸುಂದರವೋ ಅಷ್ಟೇ ...........................

ಅ) ಶಿಸ್ತಿನ ಸಿಪಾಯಿ ಬ) ಮೃದು ಸಿಪಾಯಿ
ಕ) ಚೇಷ್ಟೆಯ ಸಿಪಾಯಿ ಡ) ಸಿಟ್ಟಿನ ಸಿಪಾಯಿ

೩) ನವಿಲು ಇರುವ ಪ್ರದೇಶಗಳಲ್ಲಿ ಇವು ಸುಳಿಯಲಾರವು ...........................

ಅ) ಹಕ್ಕಿಗಳು ಬ) ಕೀಟಗಳು
ಕ) ಹಾವುಗಳು ಡ) ಮೊಲಗಳು

೪) ನವಿಲಿಗೆ ಹಸಿರು ಛಾಯೆ ಈ ದೇಶಗಳಲ್ಲಿ ಇರುತ್ತದೆ ...........................

ಅ) ಕೀನ್ಯಾ ಮತ್ತು ಜಪಾನ್ ಬ) ಅಮೇರಿಕ ಮತ್ತು ಇಂಗ್ಲೆಂಡ್
ಕ) ಜಾವಾ ಮತ್ತು ಮಯನ್ಮಾರ್ ಡ) ಶ್ರೀಲಂಕಾ ಮತ್ತು ಭಾರತ

## III. ಭಾಷಾಭ್ಯಾಸ :

**ಅ) ಈ ಪದಗಳನ್ನು ಸ್ವಂತವಾಕ್ಯಗಳಲ್ಲಿ ಉಪಯೋಗಿಸಿ ಬರೆಯಿರಿ.**

೧. ಹಚ್ಚಹಸಿರು :..........................................................................

೨. ಅಪರಾಧ :..........................................................................

೩. ಸುಂದರ :..........................................................................

೪. ಸಂಕೇತ :..........................................................................

೫. ಮನಸೋಲು :..........................................................................

೬. ಶಿಸ್ತಿನ ಸಿಪಾಯಿ :..........................................................................

**ಆ) ಕೆಳಗಿನ ಪದಗಳಿಗೆ ಸಮಾನಾರ್ಥಕ ಪದಗಳನ್ನು ಬರೆಯಿರಿ.**

**ಮಾದರಿ : ನೃತ್ಯ –** ನರ್ತನ, ಕುಣಿತ.

೧. ನಯನ – .................. ..................

೨. ನವಿಲು – .................. ..................

೩. ಲಾವಣ್ಯ – .................. ..................

೪. ರೆಕ್ಕೆ – .................. ..................

೫. ಬಂಗಾರ – .................. ..................



**ಇ) ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

೧. ಹಿಂಸೆ X ..................

೨. ಆರಂಭ X ..................

೩. ಹೊಗಳು X ..................

೪. ಶಿಸ್ತು X ..................

## ಈ) ಈ ಪದಗಳನ್ನು ಗಟ್ಟಿಯಾಗಿ ಉಚ್ಚರಿಸಿ ಬರೆಯಿರಿ.

| ಹಚ್ಚಹಸಿರು | ರಾಷ್ಟ್ರಪಕ್ಷಿ | ಸಹಸ್ರಾಕ್ಷ | ಷಣ್ಮುಖ |
|---|---|---|---|
| .................. | .................. | .................. | .................. |
| ................. | .................. | .................. | .................. |
| ................. | .................. | .................. | .................. |
| ................. | .................. | .................. | .................. |

## ಉ) ಗೆರೆ ಎಳೆದಿರುವ ಅನುಕರಣೀಯ ಪದಗಳನ್ನು ಗಮನಿಸಿ ಸ್ಪಷ್ಟವಾಗಿ ಉಚ್ಚರಿಸಿರಿ.

೧. **ಜುಳು ಜುಳು** ನದಿ ಹರಿಯುತ್ತದೆ.

೨. ಕಣ್ಣು **ಫಳ ಫಳ** ಹೊಳೆಯುತ್ತದೆ.

೩. ನವಿಲು **ಥಕ ಥೈ** ಎಂದು ಕುಣಿಯುತ್ತದೆ.

೪. **ಢಣ ಢಣ** ಗಂಟೆ ಬಾರಿಸಿತು.

೫. **ಜಿಟಿ ಜಿಟಿ** ಮಳೆ ಸುರಿಯಿತು.



## ಊ) ಕೆಳಗಿನ ಪದಗಳನ್ನು ಸ್ಪಷ್ಟವಾಗಿ ಉಚ್ಚರಿಸಿ, ಅರ್ಥ ವ್ಯತ್ಯಾಸ ತಿಳಿಯಿರಿ.

೧. ಅಕ್ಕಿ – ಹಕ್ಕಿ

೨. ಝರಿ – ಜರಿ

೩. ಕಾಳು – ಕಾಲು

೪. ಅರಿ – ಹರಿ

೫. ಧನ – ದನ

೬. ಫಲ – ಪಲ

೭. ಉಣ್ಣು – ಹುಣ್ಣು

೮. ಏರು – ಹೇರು

## IV. ಸೈದ್ಧಾಂತಿಕ ವ್ಯಾಕರಣ :

### ೧. ಗುಣಿತಾಕ್ಷರಗಳು :

ಮಕ್ಕಳೇ, ನಿಮಗೆ ಕನ್ನಡ ವರ್ಣಮಾಲೆಯನ್ನು ಬರೆಯಲು ಬರುತ್ತದೆ. ಅವುಗಳ ಪರಿಚಯ ನಿಮಗೆ ಇದೆ. ಈಗ ಇಲ್ಲಿ ನೀಡಿರುವ ಅಕ್ಷರಗಳನ್ನು ಗಮನಿಸಿರಿ.

ಕ್ + ಅ = ಕ
ಕ್ + ಆ = ಕಾ
ಕ್ + ಇ = ಕಿ
ಕ್ + ಈ = ಕೀ
ಕ್ + ಉ = ಕು
ಕ್ + ಊ = ಕೂ
ಕ್ + ಋ = ಕೃ

ಕ್ + ಎ = ಕೆ
ಕ್ + ಏ = ಕೇ
ಕ್ + ಐ = ಕೈ
ಕ್ + ಒ = ಕೊ
ಕ್ + ಓ = ಕೋ
ಕ್ + ಔ = ಕೌ
ಕ್ + ಅಂ = ಕಂ
ಕ್ + ಅಃ = ಕಃ

ಮಕ್ಕಳೇ ಇಲ್ಲಿ ವ್ಯಂಜನಗಳಿಗೆ ಸ್ವರಾಕ್ಷರಗಳು ಸೇರಿ ಹೊಸ ರೂಪದ ಅಕ್ಷರಗಳು ರಚನೆಗೊಂಡಿವೆ. ಇವುಗಳನ್ನು ಗುಣಿತಾಕ್ಷರಗಳು ಎಂದು ಕರೆಯುತ್ತಾರೆ. ನೀವು ಉಳಿದ ವ್ಯಂಜನಾಕ್ಷರಗಳಿಗೆ ಸ್ವರಗಳನ್ನು ಸೇರಿಸಿ ಗುಣಿತಾಕ್ಷರಗಳನ್ನು ಬರೆಯಿರಿ.

**೨. ಕೆಳಗಿನ ಅಕ್ಷರಗಳನ್ನು ಸೇರಿಸಿ ಗುಣಿತಾಕ್ಷರ ಬರೆಯಿರಿ.**

ಯ್ + ಅ = ....................
ರ್ + ಆ = ....................
ಸ್ + ಇ = ....................
ಲ್ + ಈ = ....................
ಟ್ + ಉ = ....................
ತ್ + ಊ = ....................
ಡ್ + ಋ = ....................

ಗ್ + ಎ = ....................
ಜ್ + ಏ = ....................
ಪ್ + ಐ = ....................
ನ್ + ಒ = ....................
ಚ್ + ಓ = ....................
ಹ್ + ಔ = ....................
ಹ್ + ಅಂ = ....................
ದ್ + ಉಃ = ....................

## ಪೂರಕ ಓದು :

**(ಈ ಹಾಡನ್ನು ಎಲ್ಲರೂ ಕೂಡಿ ಹಾಡಿ ನಲಿಯಿರಿ ಹಾಗೂ ಪ್ರಸ್ತುತ ಗದ್ಯದಲ್ಲಿನ ವಿಚಾರಗಳೊಂದಿಗೆ ಇರುವ ಸಾಮ್ಯತೆಯನ್ನು ಗಮನಿಸಿರಿ.)**

### ನವಿಲು

ನವಿಲೆ ನವಿಲೆ
ನೀಲಿಯ ನವಿಲೆ
ಕಣ್ಣನು ಎಣಿಸುವೆ ಬಾ ಇಲ್ಲಿ
ಸಾವಿರ ಕಂಗಳ
ಹೊಳಪನು ತೋರುತ
ಓಡುವೆ ಏಕೆ ನೀ ಅಲ್ಲಿ ॥ ೧ ॥

ನಿನ್ನಯ ಕೊರಳಿನ
ಬಣ್ಣವ ತುಂಬಿದೆ
ಸುಂದರ ನೀಲಿಯ ಬೆಳಕನ್ನು
ನಿನ್ನನು ಮಾಡಿದ
ಕೈಗಳ ಚೆಲುವು
ಎಲ್ಲಿ ಅಡಗಿದೆ ಹೇಳಿನ್ನು ॥ ೨ ॥

ಅತ್ತಲು ಇತ್ತಲು
ಕತ್ತನು ತಿರುಗಿಸಿ
ಕರೆಯುವೆ ಯಾರನು ಆಟಕ್ಕೆ
ಹಾಲಿನ ಜೊತೆಯಲಿ
ಹಣ್ಣನು ನೀಡುವೆ
ಮರೆಯದೇ ಬಾ ನೀ ಊಟಕ್ಕೆ ॥ ೩ ॥

– ಅಯ್ಯಪ್ಪಯ್ಯ ಹುಡಾ

## V. ಚಟುವಟಿಕೆ :

ಮಕ್ಕಳೇ, ಇಲ್ಲಿ ಹಲವು ಪಕ್ಷಿಗಳು ಅಡಗಿ ಕುಳಿತಿವೆ. ನೀವು ಪತ್ತೆ ಹಚ್ಚಬಲ್ಲಿರಾ? ನೀವು ಎಡಕ್ಕೂ, ಬಲಕ್ಕೂ, ಮೇಲಕ್ಕೂ, ಕೆಳಕ್ಕೂ, ಮೂಲೆಯಿಂದ ಮೂಲೆಗೆ ಅಕ್ಷರಗಳಲ್ಲಿ ಜೋಡಿಸಿದರೆ ಆ ಎಲ್ಲಾ ಪಕ್ಷಿಗಳು ನಿಮಗೆ ಸಿಗುತ್ತವೆ.

**ಉದಾ : ನವಿಲು**

| ನೀ | ಬಾ | ದಾ | ನಾ | ರಿ | ಮೈ | ನಾ | ಹ | ಕ್ಕಿ |
|---|---|---|---|---|---|---|---|---|
| ಸು | ಕೋ | ಗಿ | ಲೆ | ಕೋ | ಹಾ | ಕೋ | ಳಿ | ಸಾ |
| ನೀ | ಬಾ | ದಾ | ನಾ | ರಿ | ಮೈ | ನಾ | ಹ | ಕ್ಕಿ |
| ಲ | ಗೊ | ರ | ವಂ | ಕ | ದಾ | ಪಾ | ಚಿ | ಗೂ |
| ಪಾ | ರು | ಗೆ | ನ | ಕೊ | ಕ್ಕ | ರೆ | ಯ | ಬೆ |
| ಳಿ | ಗು | ಕ್ಕಿ | ಗೀ | ವಿ | ದಾ | ಸಾ | ಗಿ | ರಾ |
| ಕೋ | ಬ್ಬ | ಹ | ಜ | ರೆಂ | ಲು | ಮ | ಳಿ | ಜ |
| ತು | ಚ್ಚಿ | ಮ | ಗ | ಬೆ | ರೆ | ರಾ | ಣಿ | ನ |
| ಬಾ | ಳು | ಪಾ | ರಿ | ವಾ | ಳ | ಯ | ಗೆ | ಕಾ |
| ರ | ಣ | ಹ | ದ್ದು | ಸ | ಕು | ಮ | ಜ್ಜೆ | ಳಿ |





## ಪದ್ಯ ಪಾಠ – ೪




# ಗೂಡಿನಿಂದ ಬಾನಿನೆಡೆಗೆ

– ಪ. ಗು. ಸಿದ್ಧಾಪುರ

ಗೂಡಿನಿಂದ ಬಾನಿನೆಡೆಗೆ
ಹಕ್ಕಿ ಹಾರಿತು ।
ರೆಕ್ಕೆ ಬಡಿದು ಬಡಿದು ಹಕ್ಕಿ
ಮೇಲಕೇರಿತು ॥ ೧ ॥

ಮೇಲ ಮೇಲಕೇರಿ ಹಕ್ಕಿ
ಕೆಳಗೆ ನೋಡಿತು !
ಹಳ್ಳಕೊಳ್ಳ ಹಸಿರು ಬೆಟ್ಟ
ಕಂಡು ಹಾಡಿತು ॥ ೨ ॥





ಏನು ಅಂದ ಏನು ಚಂದ
ಗೂಡಿನಾಚೆಗೆ ।
ಗೂಡು ತೊರೆದು ಹಾರಬೇಕು
ನಿತ್ಯ ಬಾನಿಗೆ ॥ ೩ ॥

ಸಗ್ಗ ಸುಖವು ಕಂಡ ಹಾಗೆ
ಹಿಗ್ಗಿ ಆಡಿತು !
ಆಡಿ ಆಡಿ ಹಕ್ಕಿ ಮರಳಿ
ಗೂಡು ಸೇರಿತು ॥ ೪ ॥

ಅಮ್ಮ ಮರಳಿ ಮನೆಗೆ ಬರಲು
ಹಿಗ್ಗಿ ಹೇಳಿತು !
ಆಡಿ ಬಂದೆ ಗೂಡಿನಾಚೆ
ಎಂದು ನಕ್ಕಿತು ॥ ೫ ॥

ತೀರಲಿಲ್ಲ ಕಂದ ನೀನು
ನೋಡು ತಾಣವು
ಬೆಳೆದ ಮೇಲೆ ತಿಳಿವುದಾಗ
ಜಗದ ಲೀಲೆಯು ॥ ೬ ॥



## ಕೃತಿಕಾರರ ಪರಿಚಯ :

**ಪ. ಗು. ಸಿದ್ದಾಪುರ** ಇವರು ವಿಜಯಪುರ ಜಿಲ್ಲೆಯ ದಾಶಾಳ ಗ್ರಾಮದವರು. ಮಕ್ಕಳ ಕವಿಗಳೆಂದು ಹೆಸರು ಪಡೆದಿರುವ ಇವರು ರಾಜ್ಯ ಪ್ರಶಸ್ತಿ ಪುರಸ್ಕೃತ ಚಿತ್ರಕಲಾ ಶಿಕ್ಷಕರು. ಇವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ಮಕ್ಕಳ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ.



ಮರಿಹಕ್ಕಿಯು ಗೂಡಿನಿಂದ ಆಕಾಶಕ್ಕೆ ಹಾರುತ್ತದೆ. ಅಲ್ಲಿಂದ ಹಳ್ಳ-ಕೊಳ್ಳ ನೋಡುತ್ತದೆ. ಗೂಡಿನಾಚೆಗೆ ಏನು ಚಂದ ಏನು ಅಂದ ಎಂದು ಭಾವಾವೇಶಕ್ಕೆ ಒಳಗಾಗುತ್ತದೆ. ಸ್ವರ್ಗದ ಸುಖ ಕಂಡಷ್ಟು ಸುಖ ಅನುಭವಿಸುತ್ತದೆ. ತಾಯಿಗೆ ಇದನ್ನು ಹೇಳಿದಾಗ, ಮಗುವೆ ನೀನು ನೋಡುವ ಸ್ಥಳಗಳು ಮುಗಿದಿಲ್ಲ. ಬೆಳೆದ ಮೇಲೆ ಈ ಜಗದ ಲೀಲೆ ನೋಡು ಎನ್ನುತ್ತದೆ.

# ಅಭ್ಯಾಸ

## I. ಪದಗಳ ಅರ್ಥ :

**ಗೂಡು** – ಹಕ್ಕಿಗಳ ವಾಸದ ನೆಲೆ.
**ಜಗದಲೀಲೆ** – ಪ್ರಕೃತಿಯ ಆಟ
**ತೀರು** – ಕೊನೆಯಾಗು, ಅಂತ್ಯ
**ನೋಡು ತಾಣವು** – ನೋಡುವ ಸ್ಥಳಗಳು.
**ಬಾನು** – ಆಗಸ; ಆಕಾಶ.
**ಮರಳಿ** – ಹಿಂತಿರುಗಿ
**ಸಗ್ಗ** – ಸ್ವರ್ಗ
**ಹಸಿರುಬೆಟ್ಟ** – ಗಿಡಮರಗಳಿರುವ ಬೆಟ್ಟ.
**ಜಗ** – ಜಗತ್ತು; ಪ್ರಪಂಚ.
**ತಾಣ** – ಜಾಗ; ಸ್ಥಾನ.
**ತೊರೆ** – ಬಿಡು
**ನಿತ್ಯ** – ಪ್ರತಿ ದಿನ
**ಬೆಟ್ಟ** – ಗುಡ್ಡ; ಪರ್ವತ.
**ಲೀಲೆ** – ಆಟ; ವಿನೋದ.
**ಹಳ್ಳಕೊಳ್ಳ** – ತಗ್ಗು; ಕಣಿವೆ.
**ಹಿಗ್ಗು** – ಸಂತೋಷ

## II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಹಕ್ಕಿ ಗೂಡಿನಿಂದ ಎಲ್ಲಿಗೆ ಹಾರಿತು?
೨. ಹಕ್ಕಿ ಮೇಲಕ್ಕೆ ಹೇಗೆ ಏರಿತು?
೩. ಮೇಲಕ್ಕೆ ಏರಿದ ಹಕ್ಕಿಗೆ ಕೆಳಗೆ ಕಂಡದ್ದು ಏನು?
೪. ಗೂಡಿನಾಚೆಗೆ ಇರುವ ನೋಟ ಕಂಡು ಹಕ್ಕಿ ಏನೆಂದು ಉದ್ಗಾರವೆತ್ತಿತು?
೫. ಹಕ್ಕಿ ನಿತ್ಯ ಎಲ್ಲಿಗೆ ಹಾರಬೇಕೆಂದು ಯೋಚಿಸಿತು?
೬. ಅಮ್ಮನಿಗೆ ಮರಿಹಕ್ಕಿ ಏನು ಹೇಳಿತು?
೭. ತಾಯಿ ಹಕ್ಕಿ ಕಂದನಿಗೆ ಹೇಳಿದುದೇನು?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಹಕ್ಕಿ ನಿತ್ಯ ಬಾನಿಗೆ ಹಾರಬೇಕೆಂದು ಏಕೆ ಯೋಚಿಸಿತು?
೨. ಗೂಡಿನಾಚೆಗೆ ಇರುವ ಚಂದವನ್ನು ಕಂಡು ಹಕ್ಕಿ ಹೇಗೆ ಹಿಗ್ಗಿತು?

ಇ) ಬಿಟ್ಟ ಸ್ಥಳಗಳನ್ನು ಕೊಟ್ಟಿರುವ ನಾಲ್ಕು ಉತ್ತರಗಳಲ್ಲಿ ಸರಿಯಾದುದನ್ನು ಆರಿಸಿ ಬರೆಯಿರಿ.

೧. ಗೂಡಿನಿಂದ ಹಕ್ಕಿ ................................ ಹಾರಿತು.
ಅ) ನಾಡಿನೆಡೆಗೆ ಆ) ಬಾನಿನೆಡೆಗೆ ಇ) ಭೂಮಿಕಡೆಗೆ ಈ) ಮನೆಯಕಡೆಗೆ

೨. ಮೇಲಕೇರಿದ ಹಕ್ಕಿ ಹಳ್ಳಕೊಳ್ಳ ಹಸಿರುಬೆಟ್ಟ ಕಂಡು ................................
ಅ) ಹೆದರಿತು ಆ) ಬೆವರಿತು ಇ) ಕಿರುಚಿತು ಈ) ಹಾಡಿತು

೩. ಗೂಡಿನಾಚೆಗಿನ ಚಂದವು ಹಕ್ಕಿಗೆ ................................ ಕಂಡಂತಾಯಿತು.
ಅ) ಸಗ್ಗಸುಖ ಆ) ಜಗದಸುಖ ಇ) ಮನದಸುಖ ಈ) ದೊಡ್ಡಸುಖ

೪. ಮರಿಹಕ್ಕಿ ತಾನು ಕಂಡ ಸುಖವನ್ನು ಅಮ್ಮನಿಗೆ ................................ ಹೇಳಿತು.
ಅ) ಎದ್ದು ಆ) ಬಗ್ಗಿ ಇ) ಕುಗ್ಗಿ ಈ) ಹಿಗ್ಗಿ

೫. ಬೆಳೆದ ಮೇಲೆ ತಿಳಿಯುವುದು ................................
ಅ) ದೇವರ ಲೀಲೆ ಆ) ಜಗದ ಲೀಲೆ ಇ) ಬಾನ ಲೀಲೆ ಈ) ಮನದ ಲೀಲೆ



## III. ಭಾಷಾಭ್ಯಾಸ :

ಅ) 'ಅ' ಪಟ್ಟಿಗೆ 'ಬ' ಪಟ್ಟಿಯನ್ನು ಹೊಂದಿಸಿ ಬರೆಯಿರಿ.

| 'ಅ' ಪಟ್ಟಿ | 'ಬ' ಪಟ್ಟಿ | |
|---|---|---|
| ಅ) ಸಗ್ಗ | ೧) ಆಕಾಶ | ................................ |
| ಆ) ತಾಣ | ೨) ಮುಗಿ | ................................ |
| ಇ) ಬಾನು | ೩) ಆಟ | ................................ |
| ಈ) ತೀರು | ೪) ಸ್ವರ್ಗ | ................................ |
| ಉ) ಲೀಲೆ | ೫) ಸ್ಥಾನ | ................................ |
| | ೬) ಜಾಣ | ................................ |

## ಆ) ಕೆಳಗಿನ ಪದಗಳನ್ನು ನಿಮ್ಮ ಸ್ವಂತ ವಾಕ್ಯದಲ್ಲಿ ಬಳಸಿ, ಬರೆಯಿರಿ.

೧. ಗೂಡು : ..................................................................................

೨. ಬಾನು : ..................................................................................

೩. ಹಳ್ಳಕೊಳ್ಳ : ..............................................................................

೪. ತಾಣ : ..................................................................................

೫. ಬೆಟ್ಟ : ..................................................................................

## ಇ) ಈ ಪದ್ಯದಲ್ಲಿರುವ ಪ್ರಾಸ ಪದಗಳನ್ನು ಹುಡುಕಿ ಬರೆಯಿರಿ.

ಮೇಲ ಮೇಲಕೇರಿ ಹಕ್ಕಿ

ಕೆಳಗೆ ನೋಡಿತು !

ಹಳ್ಳಕೊಳ್ಳ ಹಸಿರು ಬೆಟ್ಟ

ಕಂಡು ಹಾಡಿತು !!



## ಈ) ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.

ಮೇಲೆ X .................

ಸ್ವರ್ಗ X .................

ಸುಖ X .................

ಏರು X .................

ಹಿಗ್ಗು X .................

ನಗು X .................

ಹಗಲು X .................

ನಿತ್ಯ X .................

ಉ) ಈ ಪದಗಳನ್ನು ಬಿಡಿಸಿ ಬರೆದಿದೆ ಗಮನಿಸಿ ಓದಿರಿ.

೧. ಬಾನಿನೆಡೆಗೆ = ಬಾನಿನ + ಎಡೆಗೆ

೨. ಮೇಲಕೇರಿ = ಮೇಲಕೆ + ಏರಿ

೩. ಗೂಡಿನಾಚೆ = ಗೂಡಿನ + ಆಚೆ

೪. ತಿಳಿವುದಾಗ = ತಿಳಿವುದು + ಆಗ

## ಪೂರಕ ಓದು

(ಈ ಕೆಳಗಿನ ಪದ್ಯ ಓದಿ, ಇದರ ಸಾರಾಂಶ ಹೇಳಿರಿ.)

### ಹಕ್ಕಿ ಮತ್ತು ಚುಕ್ಕಿ

ಮರದೊಳಗಿನ
ಹಕ್ಕಿಗಳು
ನನ್ನ ಗೆಳೆಯರು

ಮುಗಿಲ ಮೇಲಿನ
ಚುಕ್ಕಿಗಳು
ನನ್ನ ಗೆಳೆಯರು

ನಿತ್ಯ ಹಗಲು
ಹಕ್ಕಿಗಳೊಡನೆ
ಮಾತನಾಡುವೆ
ಮುದದಿ ನಾನು
ಸಮಯ ಕಳೆಯುವೆ

– ಜಯವಂತ ಕಾಡದೇವರು





## ಗದ್ಯ ಪಾಠ – ೫

# ಹಸ್ತರೇಖೆ ಬದಲಿಸಿದ ಬಾಲಕ






ತಕ್ಷಶಿಲೆ ಪ್ರಾಚೀನ ಭಾರತದ ಅತಿದೊಡ್ಡ ಗುರುಕುಲ. ಅಲ್ಲಿ ಓದುವುದೆಂದರೆ ಘನತೆಯ ವಿಷಯ. ತಮ್ಮ ಮಕ್ಕಳು ಅಲ್ಲಿ ಓದಿ ವಿದ್ಯಾವಂತರಾಗಲಿ ಎಂದು ತಂದೆ–ತಾಯಿಗಳು ಆಸೆ ಪಡುತ್ತಿದ್ದರು. ಒಬ್ಬ ತಾಯಿ ತನ್ನ ಮಗನನ್ನು ಗುರುಕುಲಕ್ಕೆ ಸೇರಿಸಲು ಬಂದಳು. ವಿದ್ಯೆ ಕಲಿಸುವಂತೆ ಗುರುಗಳಲ್ಲಿ ಬೇಡಿಕೊಂಡಳು.

ಬಾಲಕನಿಗೆ ಗುರುಕುಲದ ವಾತಾವರಣ ಹೊಸದು. ಎತ್ತಲೋ ನೋಡುತ್ತ ನಿಂತಿದ್ದ. ಗುರುಗಳು ಆತನನ್ನು ಗಮನಿಸಿದರು. ಕರೆದು ಬಾಲಕನ ಕೈ ನೋಡಿದರು. ನಿರಾಶರಾದರು. ಈ ಬಾಲಕನಿಗೆ ಓದಿನಲ್ಲಿ ಅಭಿರುಚಿಯಿಲ್ಲ. ವಿದ್ಯೆ ಹತ್ತದು ಎಂದು ತಿಳಿಸಿದರು. ತಾಯಿ ದಕ್ಷಿ ಗಾಬರಿಯಾದಳು. ವಿದ್ಯಾದಾನ ಮಾಡುವಂತೆ ಗುರುಗಳಲ್ಲಿ ಪರಿಪರಿಯಾಗಿ ಬೇಡಿಕೊಂಡಳು. ಆದರೆ ಗುರುಗಳು "ಅವನ ಕೈಯಲ್ಲಿ ವಿದ್ಯಾರೇಖೆಯಿಲ್ಲ. ವಿದ್ಯೆ ಹತ್ತುವುದಿಲ್ಲ" ಎಂದು ಕಡ್ಡಿ ಮುರಿದಂತೆ ಹೇಳಿದರು. ತಾಯಿಗೆ ತುಂಬಾ ನಿರಾಸೆ ಆಯಿತು. ಅವಳಿಗೆ ಅಳು ಬಂದಿತು. ತಾಯಿಯ ನೋವನ್ನು ಆ ಬಾಲಕ ಗಮನಿಸಿದ. ತಾಯಿಯ ಆಸೆಯನ್ನು ಪೂರೈಸಲು ಯೋಚಿಸತೊಡಗಿದ.



ಸ್ವಲ್ಪ ಸಮಯದ ನಂತರ ಬಾಲಕ ಮತ್ತೆ ಅಲ್ಲಿಗೆ ಬಂದನು. "ಏಕೆ ಬಂದೆ?" ಎಂದು ಗುರುಗಳು ಗಡುಸಾಗಿ ಕೇಳಿದರು. "ಗುರುಗಳೆ, ವಿದ್ಯಾರೇಖೆ ಹೇಗಿರುತ್ತದೆ?" ಎಂದು ಬಾಲಕ ವಿನೀತನಾಗಿ ಕೇಳಿದನು. ಗುರುಗಳು ಬಳಿಯಿದ್ದ ಒಬ್ಬ ಬಾಲಕನನ್ನು ಕರೆದರು. ಅವನ ಕೈ ಹಿಡಿದು "ಇಗೋ ನೋಡು, ಇದು ವಿದ್ಯಾ ರೇಖೆ ! ಅದು ನಿನಗೆ ಇಲ್ಲ ಹೋಗು" ಎಂದರು. ಬಾಲಕ ನಿರಾಶನಾಗಿ ಹೊರಬಂದ. ಹಲವು ಬಾರಿ ಕೈ ನೋಡಿದ, ಯೋಚಿಸಿದ. ತಕ್ಷಣ ಬೆಣಚುಕಲ್ಲಿನಿಂದ ಗಟ್ಟಿಯಾಗಿ ವಿದ್ಯಾರೇಖೆಯನ್ನು ಕೈ ಮೇಲೆ ಕೊರೆದುಕೊಂಡನು. ಚರ್ಮ ಕಿತ್ತಿತು. ರಕ್ತ ಸುರಿಯಲು ಆರಂಭಿಸಿತು. ಆದರೂ ಭಯ ಪಡಲಿಲ್ಲ. ದಡದಡನೆ ಗುರುಕುಲದ ಒಳಗೆ ಹೊಕ್ಕ.

"ಗುರುಗಳೇ ನನ್ನ ಕೈಯಲ್ಲಿ ವಿದ್ಯಾರೇಖೆ ಮೂಡಿದೆ, ನೋಡಿ!" ಎಂದ. ತನ್ನ ಕೈಯನ್ನು ಮುಂದೆ ಚಾಚಿದ. ಆದರೆ ಅದು ನಿಜವಾದ ವಿದ್ಯಾರೇಖೆ ಆಗಿರಲಿಲ್ಲ.

ರಕ್ತ ಸುರಿಯುತ್ತಿರುವ ಆ ಪುಟ್ಟ ಕೈಯನ್ನು ಗುರುಗಳು ನೋಡಿದರು. ಗಾಬರಿಯಾದರು. ಮನಸ್ಸು ಕಲಕಿತು. ಬಾಲಕನ ತಲೆ ನೇವರಿಸಿ ಅಪ್ಪಿಕೊಂಡರು. ಅವನಲ್ಲಿ ವಿದ್ಯೆ ಕಲಿಯುವ ಛಲವನ್ನು ಗುರುತಿಸಿದರು. "ನಿನ್ನಂತಹ ಶಿಷ್ಯನಿಗೆ ಅಲ್ಲದೆ, ಇನ್ನಾರಿಗೆ ವಿದ್ಯಾದಾನ ಮಾಡಲಿ?" ಎಂದು ಕಣ್ಣೀರು ಸುರಿಸಿದರು. ಶಿಷ್ಯನನ್ನಾಗಿ ಸ್ವೀಕರಿಸಿದರು. ಈ ಬಾಲಕನೇ ಪಾಣಿನಿ.

ಪಾಣಿನಿ ಸತತ ಅಭ್ಯಾಸ ಮಾಡಿದ, ಮನನ ಮಾಡಿದ, ಮನನ ಮಾಡಿದ್ದನ್ನು ಚಿಂತನ ಮಾಡಿದ. ತನ್ನ ಪ್ರತಿಭೆಯಿಂದ ಹೊಸ ವಿಚಾರಗಳನ್ನು ಹೊರಹೊಮ್ಮಿಸಿದ. ಸಂಸ್ಕೃತ ಭಾಷೆಗೆ ವ್ಯಾಕರಣ ಶಾಸ್ತ್ರ ರಚಿಸಿದನು. ಅದು ಜಗತ್ ಪ್ರಸಿದ್ಧವಾಯಿತು. ಇಂದಿಗೂ ಪಾಣಿನಿ ರಚಿಸಿದ ವ್ಯಾಕರಣ ಶಾಸ್ತ್ರ ಸಂಸ್ಕೃತಕ್ಕೆ ಮೂಲ ಮಂತ್ರವಾಗಿದೆ. ಇವನ ಕಾಲ ಕ್ರಿ.ಪೂ. ೬ನೇ ಶತಮಾನ. ಇವನ ಗುರುವಿನ ಹೆಸರು ಉಪಪರ್ವ ಎಂಬುದಾಗಿದೆ. ವಿದ್ಯಾ ರೇಖೆ ಇಲ್ಲದಿದ್ದರೂ ಪರಿಶ್ರಮ ಮತ್ತು ಪ್ರತಿಭೆಯಿಂದ ಸಾಧನೆ ಮಾಡಬಹುದು ಎಂಬುದಕ್ಕೆ ಪಾಣಿನಿ ಉದಾಹರಣೆಯಾಗಿದ್ದಾನೆ.

* * * *

## ಅಭ್ಯಾಸ

### I. ಪದಗಳ ಅರ್ಥ :

**ಅಭಿರುಚಿ** – ಆಸಕ್ತಿ; ಒಲವು.
**ಗಡುಸು** – ಬಿರುಸು
**ಛಲ** – ಹಟ
**ಪೂರೈಸು** – ಪೂರ್ಣಮಾಡು
**ಬೆಣಚುಕಲ್ಲು** – ಹೊಳಪುಳ್ಳ ಚೂಪಾದ ಕಲ್ಲು.
**ವಿದ್ಯಾದಾನ** – ಶಿಕ್ಷಣ ನೀಡು.
**ಕಲಕು** – ಕದಡು
**ಘನತೆ** – ಹಿರಿಮೆ
**ಪರಿಪರಿ** – ವಿವಿಧ ರೀತಿ
**ಪ್ರಾಚೀನ** – ಹಿಂದಿನ
**ಬೇಡು** – ವಿನಂತಿಸು
**ವಿನೀತ** – ಸೌಜನ್ಯ; ವಿಧೇಯ; ಬಾಗಿದ.

**ಗಮನಿಸಿ–ತಿಳಿಯಿರಿ :**

**ಗುರುಕುಲ** – ಶಿಕ್ಷಣ ಕೇಂದ್ರ, ಪ್ರಾಚೀನ ಕಾಲದ ಶಾಲೆ.
**ಕಡ್ಡಿ ಮುರಿದಂತೆ ಮಾತನಾಡು** – ನಿಷ್ಠುರವಾಗಿ ಮಾತನಾಡು.
**ವಿದ್ಯಾರೇಖೆ** – ಹಸ್ತ ಸಾಮುದ್ರಿಕೆ ಶಾಸ್ತ್ರದ ಪ್ರಕಾರ ಅಂಗೈಯಲ್ಲಿ ವಿದ್ಯೆಯನ್ನು ಸೂಚಿಸುವ ಗೆರೆ.
**ಮನಸ್ಸು ಕಲಕು** – ಮನಸ್ಸಿನಲ್ಲಿ ಉಂಟಾದ ಭಾವಗಳನ್ನು ಕದಡುವುದು.
**ತಲೆ ನೇವರಿಸು** – ಪ್ರೀತಿಯಿಂದ ತಲೆಯ ಮೇಲೆ ಕೈಯಾಡಿಸು, ಸಾಂತ್ವನ ನೀಡು.

### II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಪ್ರಾಚೀನ ಭಾರತದ ಅತಿದೊಡ್ಡ ಗುರುಕುಲ ಯಾವುದು?
೨. ಮಕ್ಕಳು ತಕ್ಷಶಿಲೆಯಲ್ಲಿ ಓದಬೇಕೆಂದು ತಂದೆತಾಯಿಗಳು ಏಕೆ ಆಸೆ ಪಡುತ್ತಿದ್ದರು?
೩. ತಾಯಿ ದಕ್ಷಿ ಗುರುಗಳಲ್ಲಿ ಏನೆಂದು ಬೇಡಿಕೊಂಡಳು?
೪. ಗುರುಗಳು ಬಾಲಕನ ಕೈ ನೋಡಿ ಏನೆಂದು ಹೇಳಿದರು?
೫. ಬಾಲಕ ಕೈಯಲ್ಲಿ ವಿದ್ಯಾರೇಖೆಯನ್ನು ಯಾವುದರಿಂದ ಮೂಡಿಸಿಕೊಂಡನು?
೬. ಪಾಣಿನಿಯ ಗುರುವಿನ ಹೆಸರೇನು?
೭. ಪಾಣಿನಿ ಯಾವ ಭಾಷೆಯಲ್ಲಿ ವ್ಯಾಕರಣ ರಚಿಸಿದ್ದಾನೆ?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಗುರುಗಳು ಬಾಲಕನಿಗೆ ವಿದ್ಯೆ ಕಲಿಸಲು ಏಕೆ ನಿರಾಕರಿಸಿದರು?

೨. ಬಾಲಕ ತನ್ನ ಕೈಯಲ್ಲಿ ವಿದ್ಯಾರೇಖೆಯನ್ನು ಹೇಗೆ ಮೂಡಿಸಿಕೊಂಡನು?

೩. ಗುರುಗಳು ಪಾಣಿನಿಗೆ ವಿದ್ಯೆ ನೀಡಲು ಏಕೆ ಮನಸ್ಸು ಮಾಡಿದರು?

೪. ಪಾಣಿನಿ ಜಗತ್ ಪ್ರಸಿದ್ಧನಾದುದು ಹೇಗೆ?

**ಇ) ಕೆಳಗೆ ನೀಡಿರುವ ಮಾತುಗಳನ್ನು ಯಾರು ಯಾರಿಗೆ ಹೇಳಿದರು? ತಿಳಿಸಿರಿ.**

೧. "ಅವನ ಕೈಯಲ್ಲಿ ವಿದ್ಯಾರೇಖೆಯಿಲ್ಲ. ವಿದ್ಯೆ ಹತ್ತುವುದಿಲ್ಲ"

೨. "ಇಗೋ ನೋಡು, ಇದು ವಿದ್ಯಾರೇಖೆ!"

೩. "ಗುರುಗಳೇ ನನ್ನ ಕೈಯಲ್ಲಿ ವಿದ್ಯಾರೇಖೆ ಮೂಡಿದೆ ನೋಡಿ!"

**ಈ) ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

೧. ಬಾಲಕನು ಬೆಣಚು ಕಲ್ಲಿನಿಂದ ತನ್ನ ಕೈಮೇಲೆ .................... ಕೊರೆದುಕೊಂಡನು.

೨. ಪಾಣಿನಿಯ ತಾಯಿಯ ಹೆಸರು ..........................

೩. ಪಾಣಿನಿಯು .......................... ಶತಮಾನದಲ್ಲಿ ಬದುಕಿದ್ದನು.

೪. ಪ್ರಾಚೀನ ಭಾರತದ ಅತಿದೊಡ್ಡ ಗುರುಕುಲ .......................... ಆಗಿತ್ತು.



## III. ಭಾಷಾಭ್ಯಾಸ :

**ಅ) ಕೆಳಗಿನ ಪದಗಳನ್ನು ಸ್ವಂತ ವಾಕ್ಯದಲ್ಲಿ ಉಪಯೋಗಿಸಿ ಬರೆಯಿರಿ.**

ಪ್ರಾಚೀನ : ..........................................................................

ಅಭಿರುಚಿ : ..........................................................................

ಪೂರೈಸು : ..........................................................................

ವಿನೀತ : ..........................................................................

ಪರಿಪರಿಯಾಗಿ : ..........................................................................

**ಆ) ಈ ಪದಗಳನ್ನು ಓದುತ್ತಾ ಬರೆಯಿರಿ.**

| ಪ್ರಾಚೀನ | ವಿದ್ಯೆ | ವಿದ್ಯಾರೇಖೆ | ವ್ಯಾಕರಣ | ಚರ್ಮ |
|---|---|---|---|---|
| ...................... | ...................... | ...................... | ...................... | ...................... |
| ...................... | ...................... | ...................... | ...................... | ...................... |
| ...................... | ...................... | ...................... | ...................... | ...................... |
| ...................... | ...................... | ...................... | ...................... | ...................... |
| **ಬೆಣಚುಕಲ್ಲು** | **ಶಿಷ್ಯ** | **ಅಪ್ಪಿಕೊ** | **ಸಂಸ್ಕೃತ** | **ಕಣ್ಣೀರು** |
| ...................... | ...................... | ...................... | ...................... | ...................... |
| ...................... | ...................... | ...................... | ...................... | ...................... |
| ...................... | ...................... | ...................... | ...................... | ...................... |
| ...................... | ...................... | ...................... | ...................... | ...................... |



**ಇ) ಈ ನುಡಿಗಟ್ಟುಗಳ ಅರ್ಥ ತಿಳಿಯಿರಿ. ನಂತರ ನಿಮ್ಮ ವಾಕ್ಯದಲ್ಲಿ ಉಪಯೋಗಿಸಿರಿ.**

೧. **ವಿದ್ಯೆ ಹತ್ತು** : ವಿದ್ಯೆಯನ್ನು ತಿಳಿದುಕೊ ಅಥವಾ ಅರ್ಥ ಮಾಡಿಕೊ.
**ವಾಕ್ಯ ಪ್ರಯೋಗ** : ಆಸಕ್ತಿಯಿಲ್ಲದೆ ಅಭ್ಯಾಸ ಮಾಡಿದರೆ ವಿದ್ಯೆ ಹತ್ತುವುದಿಲ್ಲ.
**ವಾಕ್ಯ ರಚಿಸು** : ..................................................................................

೨. **ಕಡ್ಡಿ ಮುರಿದಂತೆ** : ನಿಷ್ಠುರವಾಗಿ
**ವಾಕ್ಯ ಪ್ರಯೋಗ** : ಕಡ್ಡಿಮುರಿದಂತೆ ಮಾತನಾಡಬಾರದು.
**ವಾಕ್ಯ ರಚಿಸು** : ..................................................................................

೩. **ಮನಸ್ಸು ಕಲಕು** : ಭಾವನೆಗಳನ್ನು ಕದಡು.
**ವಾಕ್ಯ ಪ್ರಯೋಗ** : ಭಿಕ್ಷುಕನ ದೀನ ಪರಿಸ್ಥಿತಿಯನ್ನು ಕಂಡು ಮನಸ್ಸು ಕಲಕಿತು.
**ವಾಕ್ಯ ರಚಿಸು** : ..........................................................................................................

**ಈ) ಇಲ್ಲಿರುವ ಪದಗಳನ್ನು ಗಮನಿಸಿ ಕೂಡಿಸಿ ಓದಿರಿ :**

೧. ಮಗು + ಅನ್ನು = ಮಗುವನ್ನು

೨. ನೋವು + ಅನ್ನು = ನೋವನ್ನು

೩. ಕೈ + ಅಲ್ಲಿ = ಕೈಯಲ್ಲಿ

೪. ಗುರುಗಳು + ಅಲ್ಲಿ = ಗುರುಗಳಲ್ಲಿ

೫. ಅಭಿರುಚಿ + ಇಲ್ಲ = ಅಭಿರುಚಿಯಿಲ್ಲ

**ಉ) ಕೆಳಗೆ ನೀಡಿರುವ ವಿಷಯ ಕಂಡಿಕೆಯಲ್ಲಿ ಬಳಕೆಯಾಗಿರುವ ಲೇಖನ ಚಿಹ್ನೆಗಳನ್ನು ಗಮನಿಸಿರಿ.**

ಸ್ವಲ್ಪ ಸಮಯದ ನಂತರ ಬಾಲಕ ಮತ್ತೆ ಅಲ್ಲಿಗೆ ಬಂದನು. “ಏಕೆ ಬಂದೆ? ಎಂದು ಗಡುಸಾಗಿ ಕೇಳಿದರು. “ಗುರುಗಳೆ, ವಿದ್ಯಾರೇಖೆ ಹೇಗಿರುತ್ತದೆ?” ಎಂದು ಬಾಲಕ ವಿನೀತನಾಗಿ ಕೇಳಿದನು. “ನೋಡಿ, ಗುರುಗಳೇ ನನ್ನ ಕೈಯಲ್ಲಿ ವಿದ್ಯಾರೇಖೆ ಮೂಡಿದೆ!” ಎಂದು ಸಂತಸದಿಂದ ಕೈ ಮುಂದೆ ಚಾಚಿದ.

**ಕಂಸದಲ್ಲಿರುವ ಲೇಖನ ಚಿಹ್ನೆಗಳ ಹೆಸರು ತಿಳಿಯಿರಿ.**

೧. (.) ಪೂರ್ಣ ವಿರಾಮ

೨. (,) ಅಲ್ಪ ವಿರಾಮ

೩. (?) ಪ್ರಶ್ನಾರ್ಥಕ ಚಿಹ್ನೆ

೪. (“.....”) ಉದ್ಧರಣ ಚಿಹ್ನೆ

೫. (!) ಆಶ್ಚರ್ಯಚಿಹ್ನೆ



## ಪೂರಕ ಓದು :

**ಅ) ಈ ಕಥೆ ಓದಿ ಕೆಳಗಿನ ಪ್ರಶ್ನೆಗಳಿಗೆ ಉತ್ತರ ಹೇಳಿರಿ.**

ಏಕಲವ್ಯ ಎಂಬ ಬಾಲಕನಿದ್ದ. ಅವನಿಗೆ ದ್ರೋಣಾಚಾರ್ಯರಲ್ಲಿ ಬಿಲ್ಲು ವಿದ್ಯೆಯನ್ನು ಕಲಿಯುವ ಆಸೆ. ಒಂದು ದಿನ ನೇರವಾಗಿ ಹಸ್ತಿನಾವತಿಗೆ ಹೋದನು. ದ್ರೋಣಾಚಾರ್ಯರ ದರುಶನಕ್ಕಾಗಿ ಕಾದು ನಿಂತನು. ಗುರು ದ್ರೋಣರು ದೂರದಲ್ಲಿ ನಡೆದು ಬರುತ್ತಿದ್ದರು. ಓಡಿ ಹೋಗಿ ಅವರ ಪಾದಕ್ಕೆ ವಂದಿಸಿದನು. ತಾನು ಬೇಡರ ಬಾಲಕ, ಕಾಡಿನಲ್ಲಿ ವಾಸಿಸುತ್ತಿರುವೆ ಎಂದು ಪರಿಚಯ ಮಾಡಿಕೊಂಡನು. ವಿದ್ಯೆ ಕಲಿಸುವಂತೆ ವಿನಯದಿಂದ ಬೇಡಿಕೊಂಡನು.

ದ್ರೋಣರು ತಾವು ರಾಜಗುರುಗಳು, ಆದುದರಿಂದ ಇತರರಿಗೆ ವಿದ್ಯೆ ಕಲಿಸಲು ಆಗುವುದಿಲ್ಲ ಎಂದು ನಿರಾಕರಿಸಿದರು. ಏಕಲವ್ಯನಿಗೆ ಬಹಳ ದುಃಖವಾಯಿತು. ಗುರುಗಳ ಮಿತಿ ಅರ್ಥವಾಯಿತು. ವಿದ್ಯೆ ಕೊಡದಿದ್ದರೂ ಚಿಂತೆಯಿಲ್ಲ, ಬಿಲ್ವಿದ್ಯೆಗೆ ಆಶೀರ್ವಾದ ಬೇಡಿದ. ಗುರುಗಳು ಶುಭವಾಗಲಿ ಎಂದು ಹರಸಿದರು. ಏಕಲವ್ಯ ಕಾಡಿಗೆ ಬಂದನು. ಅವನಿಗೆ ಅನ್ನ ನೀರು ಸೇರಲಿಲ್ಲ. ನಿದ್ದೆ ಹತ್ತಲಿಲ್ಲ. ಹೇಗಾದರೂ ವಿದ್ಯೆ ಕಲಿಯಲೇಬೇಕೆಂದು ಚಡಪಡಿಸಿದನು. ಹಠ ಮನೆಮಾಡಿತು. ಮಣ್ಣಿನಿಂದ ದ್ರೋಣಾಚಾರ್ಯರ ಮೂರ್ತಿಯನ್ನು ಮಾಡಿದ. ಅದನ್ನೇ ಗುರು ಎಂದು ಪೂಜಿಸಿದನು. ಗುರುವಿನ ಎದುರಿನಲ್ಲಿ ಸತತ ಪರಿಶ್ರಮದಿಂದ ಅಭ್ಯಾಸ ಮಾಡಿದನು. ಬಿಲ್ಲು ವಿದ್ಯೆಯಲ್ಲಿ ಪರಿಣಿತನಾದನು. ಅರ್ಜುನನ್ನು ಮೀರಿಸುವಂತಹ ಪರಿಣತಿಯನ್ನು ಪಡೆದನು.

**ಪ್ರಶ್ನೆಗಳು :**

೧. ಏಕಲವ್ಯ ಯಾವ ವಿದ್ಯೆ ಕಲಿಯಬೇಕೆಂದು ಇಚ್ಛಿಸಿದನು?

೨. ಏಕಲವ್ಯನಿಗೆ ಯಾರ ಬಳಿ ವಿದ್ಯೆ ಕಲಿಯುವ ಆಸೆಯಾಯಿತು?

೩. ದ್ರೋಣರು ಏಕಲವ್ಯನಿಗೆ ಶಿಕ್ಷಣ ನೀಡಲು ಏಕೆ ನಿರಾಕರಿಸಿದರು?

೪. ಏಕಲವ್ಯ ಬಿಲ್ಲು ವಿದ್ಯೆಯಲ್ಲಿ ಹೇಗೆ ಪರಿಣಿತನಾದನು?



**ಆ) ಗುರು-ಶಿಷ್ಯರ ಸಂಬಂಧ ತಿಳಿಯಿರಿ.**

| | ಶಿಷ್ಯ | ಗುರು |
|---|---|---|
| ೧. | ರಾಮ | ವಶಿಷ್ಠ |
| ೨. | ಕೃಷ್ಣ | ಸಾಂದೀಪನಿ |
| ೩. | ಏಕಲವ್ಯ | ದ್ರೋಣಾಚಾರ್ಯ |
| ೪. | ಕರ್ಣ | ಪರಶುರಾಮ |
| ೫. | ದುರ್ಯೋಧನ | ಬಲರಾಮ |
| ೬. | ಹಕ್ಕಬುಕ್ಕ | ವಿದ್ಯಾರಣ್ಯ |
| ೭. | ಶಿವಾಜಿ | ದಾದಾಜಿ ಕೊಂಡದೇವ |
| ೮. | ವಿವೇಕಾನಂದ | ರಾಮಕೃಷ್ಣ ಪರಮಹಂಸ |






## ಗದ್ಯ ಪಾಠ – ೬

# ಹಬ್ಬಗಳು

ಗೋಪಿ, ಗಂಗಾ, ಜಾಫರ್ ಮತ್ತು ಜಾನ್ ನಾಲ್ಕು ಜನ ಗೆಳೆಯರು. ಅವರದು ಒಂದೇ ವಠಾರದಲ್ಲಿ ವಾಸ. ಒಂದೇ ಶಾಲೆಯಲ್ಲಿ ಕಲಿಕೆ. ಅವರಿಗೆ ವಠಾರದ ದಾಸಪ್ಪ ತಾತನಿಂದ ಕಥೆ ಕೇಳುವುದೆಂದರೆ ಎಲ್ಲಿಲ್ಲದ ಪ್ರೀತಿ.

ಅಂದು ಊರಿನ ಮನೆ ಮನೆಗಳಲ್ಲಿ ದೀಪಗಳ ಹಬ್ಬ. ಪಟಾಕಿ ಸಿಡಿತ, ಹೂಬಾಣದ ಚಿಕ್ಕೆಗಳು, ಸಂತೋಷವೇ ಬೀದಿಗೆ ಬಂದಿತ್ತು. ಅಂದು ಗೋಪಿ ತನ್ನ ಮನೆಯಲ್ಲಿ ತಾತ ಹಾಗೂ ತನ್ನ ಗೆಳೆಯರನ್ನು ಸ್ವಾಗತಿಸಿ ಉಪಚರಿಸಿದನು. ಎಲ್ಲರೂ ಊಟ ಮುಗಿಸಿ ವರಾಂಡದಲ್ಲಿ ಹೋಗಿ ಕುಳಿತರು.

ಜಾನ್, ಜಾಫರ್, ಗಂಗಾ ಎಲ್ಲರೂ ತಾತನನ್ನು ಕಥೆ ಹೇಳುವಂತೆ ದುಂಬಾಲು ಬಿದ್ದರು.

ತಾತ : ಇಂದು ಕಥೆ ಬೇಡ, ಹಬ್ಬಗಳ ಆಚರಣೆಯ ಹಿನ್ನೆಲೆ ತಿಳಿಯೋಣ (ಎಲ್ಲರೂ ಹೋ ಎಂದು ಕೂಗಿದರು) ಗೋಪಿ, ನಿಮ್ಮ ಮನೆಯಲ್ಲಿ ಬಹಳ ಸಡಗರವಿದೆ. ಕಾರಣ ಹೇಳುವೆಯಾ?

ಗೋಪಿ : ಓ! ಆಗಲಿ ತಾತ, ಇಂದು ದೀಪಾವಳಿ ಹಬ್ಬ, ಮನೆ ಸಿಂಗಾರ ಮಾಡುತ್ತಾರೆ. ತಳಿರು ತೋರಣ ಕಟ್ಟುತ್ತಾರೆ. ಮನೆಯಲ್ಲಿ ಬಗೆ ಬಗೆಯ ಆಕಾರದ ದೀಪಗಳನ್ನೆಲ್ಲಾ ಹಚ್ಚುತ್ತಾರೆ. ಹೊಸ ಬಟ್ಟೆ ತೊಡುತ್ತಾರೆ. ಲಕ್ಷ್ಮೀ ಪೂಜೆ ಮಾಡಿ ಪಟಾಕಿಗಳನ್ನು ಸಿಡಿಸುತ್ತಾರೆ. ಗೋವಿನ ಪೂಜೆಯನ್ನು ಮಾಡಿ ಸಂತೋಷಪಡುತ್ತಾರೆ. ಈ ಹಬ್ಬಕ್ಕೆ ಬಂಧುಬಳಗದವರನ್ನು ಕರೆಯುತ್ತಾರೆ.

ತಾತ : ದೀಪ ಏಕೆ ಹಚ್ಚುತ್ತಾರೆ? ವಿಚಾರಮಾಡಿ ಯಾರಾದರೂ ಹೇಳುವಿರಾ?

ಜಾನ್ : ದೀಪ ಅಂದರೆ ಬೆಳಕು, ಅದು ಜ್ಞಾನದ ಸಂಕೇತ.

ತಾತ : ಬಹಳ ಚೆನ್ನಾಗಿ ತಿಳಿದುಕೊಂಡಿರುವೆ. ಜಾಫರ್ ನಿಮ್ಮ ಮನೆಯಲ್ಲಿ ಯಾವ ಹಬ್ಬ ಆಚರಿಸುತ್ತೀರಾ?

ಜಾಫರ್ : ನಮ್ಮ ಮನೆಯಲ್ಲಿ ರಮ್ಜಾನ್ ಅದ್ದೂರಿಯಾಗಿ ಆಚರಿಸುತ್ತಾರೆ.

ಗಂಗಾ : ರಮ್ಜಾನ್ ಹೇಗೆ ಆಚರಿಸುತ್ತಾರೆ?

ಜಾಫರ್ : ರಮ್ಜಾನ್ ತಿಂಗಳು ಪವಿತ್ರ ತಿಂಗಳು. ಹಗಲು ಉಪವಾಸ ಮಾಡಿ ದೇವರಿಗೆ ಪ್ರಾರ್ಥನೆ ಸಲ್ಲಿಸುತ್ತಾರೆ. ಸೂರ್ಯಾಸ್ತದ ನಂತರ ಊಟ ಮಾಡುತ್ತಾರೆ, ತಿಂಗಳ ನಂತರ ಚಂದ್ರ ಕಾಣಿಸಿದ ಮೇಲೆ ಈದ್_ಉಲ್_ಫಿತರ್ ಆಚರಿಸುತ್ತಾರೆ. ಅಂದು ಹೊಸ ಬಟ್ಟೆ, ಹೊಸ ಚಪ್ಪಲಿ, ಕೊಂಡುಕೊಳ್ಳುತ್ತಾರೆ. ಸಿರ್‌ಕುರ್ಮಾ ಮಾಡುತ್ತಾರೆ. ಬಡವರಿಗೆ ದವಸ, ಧಾನ್ಯ, ಬಟ್ಟೆ, ಹಣ ದಾನ ಮಾಡುತ್ತಾರೆ. ಇದು ರಮ್ಜಾನ್ ಹಬ್ಬದ ವಿಶೇಷ.

ಗೋಪಿ : ಬಹಳ ಚೆನ್ನಾಗಿದೆ,

ಜಾನ್ : ತಾತ, ನಾವೂ ಸಹ ಇಂತಹುದೇ ಕ್ರಿಸ್‌ಮಸ್ ಹಬ್ಬ ಆಚರಿಸುತ್ತೇವೆ. ಕ್ರಿಸ್‌ಮಸ್ ಹಬ್ಬಕ್ಕೆ ಮನೆ ಸಿಂಗರಿಸುತ್ತೇವೆ. ಮರಗಳಿಗೆ ದೀಪಗಳನ್ನೆಲ್ಲಾ ಹಾಕಿ ಸಿಂಗಾರ ಮಾಡುತ್ತೇವೆ. ಅದು ಏಸುಕ್ರಿಸ್ತನ ಹುಟ್ಟುಹಬ್ಬ. ಕ್ರಿಸ್‌ಮಸ್‌ಗಾಗಿ ಸಾಂತಾಕ್ಲಾಜ್ ತಾತ ಬರುತ್ತಾನೆ. ಮಕ್ಕಳಿಗೆ ಸಿಹಿ ತಿನಿಸು ಕೊಡುತ್ತಾನೆ, ಹಾಡುತ್ತಾನೆ, ನಗಿಸುತ್ತಾನೆ, ಆಟ ಆಡಿಸುತ್ತಾನೆ. ಆತನು ಬಂದರೆ ಖುಷಿಯೋ ಖುಷಿ.

ತಾತ : ಇನ್ನೊಂದು ಮಕ್ಕಳ ಹಬ್ಬವಿದೆ. ನೆನಪಿದೆಯಾ?

ಗಂಗಾ : ಅದೇ ರಾಖಿ ಹಬ್ಬ, ಹುಡುಗಿಯರು ಅಣ್ಣ ತಮ್ಮಂದಿರುಗಳಿಗೆ ರಾಖಿಯನ್ನು ಕಟ್ಟುತ್ತಾರೆ. ಸಿಹಿ ತಿನಿಸುತ್ತಾರೆ. ಕಾಣಿಕೆಗಳನ್ನು ಪಡೆಯುತ್ತಾರೆ. ಎಲ್ಲೆಡೆ ಹುಡುಗ, ಹುಡುಗಿಯರದ್ದೇ ಗದ್ದಲ, ಸಂಭ್ರಮ!

ಜಾಫರ್ : ರಾಖಿ ಏಕೆ ಕಟ್ಟುತ್ತಾರೆ ತಾತ?

ತಾತ : ಅಣ್ಣ ತಂಗಿಯ ಬಾಂಧವ್ಯ ಗಟ್ಟಿಯಾಗಲಿ, ಅವರ ರಕ್ಷಣೆ ಮಾಡಲಿ ಎಂದು ಕಟ್ಟುತ್ತಾರೆ. ಮಕ್ಕಳೇ ನಾವು ಆಚರಿಸುವ ಇತರೆ ದೊಡ್ಡ ಹಬ್ಬಗಳು ಯಾವುವು?

ಗೋಪಿ : ದಸರಾ, ಯುಗಾದಿ, ಸಂಕ್ರಾಂತಿ, ಗುಡ್‌ಫ್ರೈಡೆ, ಈದ್–ಮಿಲಾದ್ ಮುಂತಾದವು.

ತಾತ : ಗೋಪಿ, ಭಾರತ ದೇಶದಲ್ಲಿ ಎಲ್ಲ ಜನಾಂಗದವರು ಹಾಗೂ ಸರ್ಕಾರ ಆಚರಿಸುವ ರಾಷ್ಟ್ರೀಯ ಹಬ್ಬಗಳು ಯಾವುವು?

ಗೋಪಿ : ಸ್ವಾತಂತ್ರ್ಯೋತ್ಸವ, ಗಣರಾಜ್ಯೋತ್ಸವ, ಮಕ್ಕಳ ದಿನಾಚರಣೆ ಹಾಗೂ ಶಿಕ್ಷಕರ ದಿನಾಚರಣೆಯ ಹಬ್ಬಗಳು.

ತಾತ : ಜಾನ್, ನೀನು ಮಕ್ಕಳ ದಿನಾಚರಣೆ ಬಗ್ಗೆ ಹೇಳು.

ಜಾನ್ : ..............................................................................(ಹೇಳುವನು)

ತಾತ : ಜಾಫರ್, ನೀನು ಗಣರಾಜ್ಯ ಹಬ್ಬದ ಬಗ್ಗೆ ಹೇಳು.

ಜಾಫರ್ : ..............................................................................(ಹೇಳುವನು).

ತಾತ : ಗಂಗಾ, ನೀನು ಶಿಕ್ಷಕರ ದಿನದ ಮಹತ್ವದ ಬಗ್ಗೆ ಹೇಳು?

ಗಂಗಾ : ..............................................................................(ಹೇಳುವಳು).

ತಾತ : ಈ ದೇಶದ ಮುಖ್ಯ ಹಬ್ಬವಾದ ಸ್ವಾತಂತ್ರ್ಯ ದಿನೋತ್ಸವ ಬಗ್ಗೆ ಎಲ್ಲರೂ ಒಂದೊಂದು ವಾಕ್ಯ ಹೇಳಿರಿ.

ಜಾನ್ : ..............................................................................(ಹೇಳುವನು).

ಜಾಫರ್ : ..............................................................................(ಹೇಳುವನು).

ಗೋಪಿ : ...............................................................................(ಹೇಳುವನು).

ಗಂಗಾ : ..............................................................................(ಹೇಳುವಳು).

(**ಅಧ್ಯಾಪಕರಿಗೆ ಸೂಚನೆ :** ಖಾಲಿಬಿಟ್ಟ ಸ್ಥಳಗಳಲ್ಲಿ ಮಕ್ಕಳು ಹೇಳುವ ಉತ್ತರಗಳನ್ನು ಕೇಳಿ ಪಡೆಯಿರಿ. ಮಕ್ಕಳು ಉತ್ತರಿಸಲು ಉತ್ತೇಜಿಸಿರಿ.)

**ಟಿಪ್ಪಣಿ : ರಾಷ್ಟ್ರೀಯ ಹಬ್ಬಗಳ ಬಗ್ಗೆ ಓದಿ ತಿಳಿ.**

### ೧. ಗಣರಾಜ್ಯೋತ್ಸವ :

ಭಾರತ ದೇಶವು ಪ್ರಜಾಪ್ರಭುತ್ವವನ್ನು ಆಯ್ಕೆ ಮಾಡಿಕೊಂಡ ದಿನ **೧೯೫೦ ಜನವರಿ ೨೬**. ದೇಶದ ಆಡಳಿತಕ್ಕಾಗಿ ಸಂವಿಧಾನ ರಚಿಸಿ ಅದರಂತೆ ಆಡಳಿತ ಪ್ರಾರಂಭಿಸಲಾಯಿತು. ಅಂದು ದೇಶದ ಪ್ರಗತಿಯ ಬಗ್ಗೆ ಮೆಲುಕು ಹಾಕುವ ದಿನ. ರಾಷ್ಟ್ರಾಧ್ಯಕ್ಷರು ಭಾರತದ ಅಭಿವೃದ್ಧಿಗೆ ಸಂಬಂಧಿಸಿದ ಹೊಸಹೊಸ ವಿಚಾರಗಳನ್ನು ಜನತೆಗೆ ಸಂದೇಶವಾಗಿ ನೀಡುತ್ತಾರೆ. ಅಂದು ಸಾರ್ವಜನಿಕ ಸ್ಥಳಗಳಲ್ಲಿ ರಾಷ್ಟ್ರಧ್ವಜಾರೋಹಣ ಮಾಡುತ್ತಾರೆ.



### ೨. ಸ್ವಾತಂತ್ರ್ಯೋತ್ಸವ :

ಭಾರತ ದೇಶವು **೧೯೪೭ ರ ಆಗಸ್ಟ್ ೧೫** ರಂದು ಸ್ವತಂತ್ರವಾಯಿತು. ಅಂದು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದವರನ್ನು ಸ್ಮರಣೆ ಮಾಡುತ್ತೇವೆ. ಮನೆ ಮನೆಯಲ್ಲಿ ದೀಪ ಹಚ್ಚಿ ಸ್ವಾತಂತ್ರ್ಯವನ್ನು ಸಂಭ್ರಮಿಸುತ್ತೇವೆ. ಸಾರ್ವಜನಿಕ ಸ್ಥಳಗಳಲ್ಲಿ ರಾಷ್ಟ್ರಧ್ವಜವನ್ನು ಹಾರಿಸುತ್ತೇವೆ. ಎಲ್ಲರೂ ಸಿಹಿಯನ್ನು ಹಂಚಿ ಖುಷಿಪಡುತ್ತಾರೆ.

### ೩. ಶಿಕ್ಷಕರ ದಿನ :

ಶಿಕ್ಷಕರಾಗಿ ಸೇವೆಯನ್ನು ಆರಂಭಿಸಿ, ದೇಶದ ಅತ್ಯುನ್ನತ ರಾಷ್ಟ್ರಪತಿ ಸ್ಥಾನವನ್ನು ಅಲಂಕರಿಸಿದ ಡಾ.ಸರ್ವೇಪಲ್ಲಿ ರಾಧಾಕೃಷ್ಣನ್ ಅವರ ಜನ್ಮ ದಿನವಾದ **ಸೆಪ್ಟೆಂಬರ್ ೫** ರಂದು ಪ್ರತಿವರ್ಷ ಶಿಕ್ಷಕರ ದಿನಾಚರಣೆಯನ್ನು ಆಚರಿಸುತ್ತೇವೆ. ದೇಶದ ಭವಿಷ್ಯವು

ತರಗತಿ ಕೋಣೆಯಲ್ಲಿ ಕಟ್ಟಲ್ಪಡುತ್ತದೆ. ಈ ಕೆಲಸವನ್ನು ಶಿಕ್ಷಕರು ಮಾಡುತ್ತಾರೆ. ಅವರನ್ನು ಗೌರವಿಸಬೇಕು, ಪ್ರೀತಿಸಬೇಕು ಎಂದು ಭಾರತದ ಎರಡನೆಯ ರಾಷ್ಟ್ರಪತಿ ಡಾ. ರಾಧಾಕೃಷ್ಣನ್ ಅವರು ತಮ್ಮ ಹುಟ್ಟಿದ ದಿನವನ್ನು ಶಿಕ್ಷಕರ ದಿನಾಚರಣೆ ಎಂದು ಆಚರಿಸಲು ಮುಂದಾದರು. ಅಂದು ದೇಶಕ್ಕೆ ದೇಶವೇ ಶಿಕ್ಷಕರನ್ನು ಗೌರವಿಸುತ್ತದೆ.

### ೪. ಮಕ್ಕಳ ದಿನ :

ಇಂದಿನ ಮಕ್ಕಳು ನಾಳಿನ ನಾಯಕರು. ಅವರ ಬೆಳವಣಿಗೆಯ ಬಗ್ಗೆ ಕಾಳಜಿ ವಹಿಸಲಿ ಎಂದು ಭಾರತದ ಮೊದಲ ಪ್ರಧಾನಿ ಜವಾಹರಲಾಲ ನೆಹರು ಅವರು ತಮ್ಮ ಜನ್ಮದಿನವಾದ **ನವೆಂಬರ್ ೧೪** ರಂದು ಮಕ್ಕಳ ದಿನವೆಂದು ಆಚರಿಸಿದರು. ಅಂದು ಮಕ್ಕಳ ಹಕ್ಕುಗಳನ್ನು, ಸುಖ ಸಂತೋಷಗಳನ್ನು, ಅವರ ಕನಸುಗಳನ್ನು ಪುರಸ್ಕರಿಸುವ ಕೆಲಸ ಮಾಡುತ್ತಾರೆ.



## ಅಭ್ಯಾಸ

## I. ಪದಗಳ ಅರ್ಥ :

**ಅದ್ದೂರಿ** – ವೈಭವ
**ವಠಾರ** – ಸಣ್ಣ ಮನೆಗಳಿರುವ ಆವರಣ.
**ಸಂಕೇತ** – ಸೂಚಕ; ಗುರುತು.
**ಹಿನ್ನೆಲೆ** – ಪೂರ್ವಾಪರ
**ದುಂಬಾಲು** – ಬೆನ್ನುಹತ್ತು; ಹಿಂದೆ ಬೀಳು.
**ವರಾಂಡ** – ಪಡಸಾಲೆ; ನಡುಮನೆ.
**ಸೂರ್ಯಾಸ್ತ** – ಸೂರ್ಯ ಮುಳುಗುವುದು.

### ಗಮನಿಸಿ–ತಿಳಿಯಿರಿ

**ತಳಿರು ತೋರಣ** – ಮಾವಿನ ಎಲೆಗಳಿಂದ ಬಾಗಿಲಿಗೆ ಕಟ್ಟಲು ಮಾಡಿದ ಹಾರ.
**ಶಿರ್ ಕುರ್ಮಾ** – ಶ್ಯಾವಿಗೆಯಿಂದ ಮಾಡಿದ ಸಿಹಿ ಪಾಯಸ.
**ರಾಷ್ಟ್ರೀಯ ಹಬ್ಬಗಳು** – ದೇಶಕ್ಕೆ ದೇಶವೇ ಆಚರಿಸುವ ಹಬ್ಬಗಳು. ಸರ್ಕಾರ ಅಧಿಕೃತವಾಗಿ ಆಚರಿಸುವ ಹಬ್ಬಗಳು.

## II. ಪ್ರಶ್ನೆಗಳು :

**ಅ) ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಗೋಪಿ ಮನೆಯಲ್ಲಿ ಯಾರು ಯಾರು ಸೇರಿದ್ದರು?

೨. ಗೋಪಿ ಮತ್ತು ಅವರ ಗೆಳೆಯರೆಲ್ಲ ಎಲ್ಲಿ ವಾಸಿಸುತ್ತಿದ್ದರು?

೩. ಮಕ್ಕಳಿಗೆ ದಾಸಪ್ಪ ತಾತನನ್ನು ಕಂಡರೆ ಬಲು ಪ್ರೀತಿ ಏಕೆ?

೪. ಗೋಪಿಯ ಮನೆಯಲ್ಲಿ ಗೆಳೆಯರೆಲ್ಲ ಏಕೆ ಸೇರಿದ್ದರು?

೫. ದೀಪ ಯಾವುದರ ಸಂಕೇತ?

೬. ಸಾಂತಾಕ್ಲಾಜ್ ಮಕ್ಕಳಿಗೆ ಯಾವ ರೀತಿಯ ಖುಷಿ ನೀಡುತ್ತಾನೆ?

೭. ರಾಖಿ ಏಕೆ ಕಟ್ಟುತ್ತಾರೆ?

೮. ಭಾರತದಲ್ಲಿ ವಿವಿಧ ಜನರು ಆಚರಿಸುವ ದೊಡ್ಡ ಹಬ್ಬಗಳು ಯಾವುವು?

೯. ಭಾರತದ ರಾಷ್ಟ್ರೀಯ ಹಬ್ಬಗಳು ಯಾವುವು?

**ಆ) ಈ ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿ.**

೧. ದೀಪಾವಳಿ ಹಬ್ಬವನ್ನು ಹೇಗೆ ಆಚರಿಸುತ್ತಾರೆ?

೨. ರಮ್ಜಾನ್ ಹಬ್ಬದ ವಿಶೇಷತೆಗಳೇನು?

೩. ಕ್ರಿಸ್‌ಮಸ್ ಹಬ್ಬದ ವಿಶೇಷತೆಗಳೇನು?

೪. ರಾಖಿ ಹಬ್ಬವನ್ನು ಹೇಗೆ ಆಚರಿಸಲಾಗುತ್ತದೆ?



**ಇ) ಕೆಳಗಿನ 'ಅ' ಪಟ್ಟಿಗೆ 'ಬ' ಪಟ್ಟಿಯನ್ನು ಹೊಂದಿಸಿ ಬರೆಯಿರಿ.**

| 'ಅ' ಪಟ್ಟಿ | 'ಬ' ಪಟ್ಟಿ | |
|---|---|---|
| ಅ) ಯುಗಾದಿ ಆಚರಣೆ | ೧) ಆಗಸ್ಟ್ ೧೫ | ........................ |
| ಆ) ಗಣರಾಜ್ಯ ದಿನಾಚರಣೆ | ೨) ನವಂಬರ್ ೧೪ | ........................ |
| ಇ) ಸ್ವಾತಂತ್ರ್ಯ ದಿನಾಚರಣೆ | ೩) ಡಿಸೆಂಬರ್ ೨೫ | ........................ |
| ಈ) ಮಕ್ಕಳ ದಿನಾಚರಣೆ | ೪) ಜನವರಿ ೨೬ | ........................ |
| ಉ) ಕ್ರಿಸ್‌ಮಸ್ ಆಚರಣೆ | ೫) ಚೈತ್ರ ಶುದ್ಧ ಪಾಡ್ಯ | ........................ |

ಈ) **ಬಿಟ್ಟ ಸ್ಥಳಗಳನ್ನು ನೀಡಿರುವ ಆಯ್ಕೆಯ ಉತ್ತರಗಳಿಂದ ಸರಿಯಾದುದನ್ನು ಆರಿಸಿ ಬರೆಯಿರಿ.**

೧. ದೀಪಾವಳಿ ಹಬ್ಬದಲ್ಲಿ .................................... ಪೂಜೆ ಮಾಡುತ್ತಾರೆ.

ಅ) ಗಂಗೆ ಆ) ಗೌರಿ

ಇ) ಲಕ್ಷ್ಮೀ ಈ) ಸರಸ್ವತಿ

೨. ರಾಖಿ ಹಬ್ಬದ ಉದ್ದೇಶ ................................ ಬಾಂಧವ್ಯ ಗಟ್ಟಿಗೊಳಿಸುವುದು.

ಅ) ಅಣ್ಣ ತಮ್ಮ ಆ) ಅಕ್ಕ ತಂಗಿ

ಇ) ಹುಡುಗ ಹುಡುಗಿ ಈ) ಅಣ್ಣ ತಂಗಿ

೩. ಸಾಂತಾಕ್ಲಾಜ್ ತಾತ ಬರುವ ಹಬ್ಬ ........................................

ಅ) ಸಂಕ್ರಾಂತಿ ಆ) ಕ್ರಿಸ್‌ಮಸ್

ಇ) ಯುಗಾದಿ ಈ) ರಮ್ಜಾನ್

೪. ಈದ್-ಉಲ್-ಫಿತರ್ ಅನ್ನು ....................... ಕಾಣಿಸಿದ ನಂತರ ಆಚರಿಸುತ್ತಾರೆ.

ಅ) ಚಂದ್ರ ಆ) ಸೂರ್ಯ

ಇ) ಮೋಡ ಈ) ನಕ್ಷತ್ರ

೫. ಶಿಕ್ಷಕರ ದಿನವನ್ನು ........................................ ಆಚರಿಸುತ್ತೇವೆ.

ಅ) ಜನವರಿ ೨೬ ಆ) ಆಗಸ್ಟ್ ೧೫

ಇ) ನವೆಂಬರ್ ೧೪ ಈ) ಸೆಪ್ಟೆಂಬರ್ ೫

ಉ) ಶಾಲೆಯಲ್ಲಿ ಆಚರಿಸುವ ರಾಷ್ಟ್ರೀಯ ಹಬ್ಬಗಳ ಪಟ್ಟಿಮಾಡಿ ಈ ಕೆಳಗಿನ ಅಂಕಣಗಳನ್ನು ತುಂಬಿರಿ.

| ರಾಷ್ಟ್ರೀಯ ಹಬ್ಬಗಳು | ಆಚರಿಸುವ ದಿನ | ಅದರ ಮಹತ್ವ |
|---|---|---|
| ಗಣರಾಜ್ಯದ ಹಬ್ಬ | ........................ | .................................................... |
| ಸ್ವಾತಂತ್ರ್ಯದ ಹಬ್ಬ | ........................ | .................................................... |
| ಶಿಕ್ಷಕರ ದಿನಾಚರಣೆ | ........................ | .................................................... |
| ಮಕ್ಕಳ ದಿನಾಚರಣೆ | ........................ | .................................................... |
| ಗಾಂಧೀ ಜಯಂತಿ | ........................ | .................................................... |
| ಡಾ|| ಅಂಬೇಡ್ಕರ ಜಯಂತಿ | ........................ | .................................................... |



## III. ಭಾಷಾಭ್ಯಾಸ :

ಅ) ಕೆಳಗೆ ಕೊಟ್ಟಿರುವ ಪದಗಳನ್ನು ನಿಮ್ಮ ಸ್ವಂತ ವಾಕ್ಯದಲ್ಲಿ ಉಪಯೋಗಿಸಿ ಬರೆಯಿರಿ.

೧. ತಳಿರು ತೋರಣ :..........................................................................

೨. ಸಂತೋಷ :..........................................................................

೩. ಸಿಂಗಾರ :..........................................................................

೪. ದುಂಬಾಲು :..........................................................................

೫. ಖುಷಿಯೋ ಖುಷಿ :..........................................................................

ಆ) ಕೆಳಗೆ ಕೊಟ್ಟಿರುವ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.

೧. ಸಂತೋಷ X .................. ೩. ಸೂರ್ಯಾಸ್ತ X ..................

೨. ಹಗಲು X .................. ೪. ಸ್ವಾತಂತ್ರ್ಯ X ..................

ಇ) **ಕೆಳಗಿನ ವಾಕ್ಯಗಳಲ್ಲಿನ ಪದಗಳನ್ನು ಹಿಂದೆ ಮುಂದೆ ಮಾಡಲಾಗಿದೆ. ನೀವು ಅವುಗಳನ್ನು ಸರಿಯಾಗಿ ಜೋಡಿಸಿ ಅರ್ಥಪೂರ್ಣ ವಾಕ್ಯಗಳಾಗಿ ರಚಿಸಿರಿ.**

೧. ದೀಪಗಳ ಊರಿನ ಅಂದು ಹಬ್ಬ ಮನೆಗಳಲ್ಲಿ ಮನೆ.

೨. ಹಗಲು ರಮ್ಜಾನ್ ಮಾಡಿ ದೇವರಿಗೆ ಉಪವಾಸ ಸಲ್ಲಿಸುತ್ತಾರೆ ತಿಂಗಳಲ್ಲಿ ಪ್ರಾರ್ಥನೆ.

೩. ಮನೆಯನ್ನು ಕ್ರಿಸಮಸ್ ಸಿಂಗರಿಸುತ್ತಾರೆ ಹಬ್ಬಕ್ಕೆ.

೪. ಕಟ್ಟುತ್ತಾರೆ ರಾಖಿಯನ್ನು ಅಣ್ಣ ಹುಡುಗಿಯರು ತಮ್ಮಂದಿರುಗಳಿಗೆ.

## ಪೂರಕ ಓದು :

**(ಈ ಹಾಡನ್ನು ಎಲ್ಲರೂ ಕೂಡಿ ಹಾಡಿ ನಲಿಯಿರಿ ಹಾಗೂ ಪ್ರಸ್ತುತ ಗದ್ಯದಲ್ಲಿನ ವಿಚಾರಗಳೊಂದಿಗೆ ಇರುವ ಸಾಮ್ಯತೆಯನ್ನು ಗಮನಿಸಿರಿ.)**

### ಹಬ್ಬಗಳು

ವೈವಿಧ್ಯತೆಯಲಿ, ಏಕತೆಯ ಪ್ರತೀಕ ಭಾರತವು
ಋತುಮಾನದ ಬದಲಾವಣೆಗಳು ವೈವಿಧ್ಯತೆಯು,
ಪುರಾಣದ ಘಟನೆಗಳು ಹಬ್ಬಗಳ ಆಚರಣೆಯ ಸಂಕೇತ
ಎಲ್ಲರೂ ಬೆರತು ಆಚರಿಸುವೆವು ಹಾರೈಸುತ

ಸುಗ್ಗಿಯ ಹಬ್ಬ ಸಂಕ್ರಾಂತಿ ಹಿಗ್ಗನು ತರುತಲಿ
ರೈತರ ಪ್ರಗತಿಗೆ ಹಾದಿ ಮೂಡಿಸಲಿ
ಉತ್ತಮ ಮಳೆಬೆಳೆಯಿಂದ ನಾಡದು ಹಸಿರಾಗಲಿ
ದವಸ ಧಾನ್ಯಗಳು ಸುಭಿಕ್ಷವಾಗಲಿ, ಮನೆಗಳಲಿ.

ವಿಜಯವಾಗಲಿ ಎಲ್ಲರ ಕಾರ್ಯದಲಿ
ವಿಜಯಲಕ್ಷ್ಮಿಯು ಒಲಿಯಲಿ ಎಲ್ಲರ ಬಾಳಿನಲಿ
ವಿಜಯೋತ್ಸಾಹ ತುಂಬಲಿ ಎಲ್ಲರ ಹೃದಯದಲಿ
ಸಂತೋಷಭರಿತ ನವರಾತ್ರಿಯ ಶುಭ ದಶಮಿಯಲಿ.

ದೀಪಾವಳಿಯ ಜ್ಞಾನದ ಬೆಳಕಲಿ, ಅಜ್ಞಾನದ ಕತ್ತಲು ಮಾಯವಾಗಲಿ,
ಎಲ್ಲರ ಮನ ಮನೆಯಲಿ ಸುಖ, ಶಾಂತಿ, ಸಂತೋಷ ತುಳುಕಲಿ
ಮಿತಿಯಿಂ ಪಟಾಕಿ ಸಿಡಿಸಿ, ಶಬ್ದ, ವಾಯು ಮಾಲಿನ್ಯ ತಡೆದು, ಪರಿಸರ ಉಳಿಸಿ,
ಭಾರತೀಯ ಹಬ್ಬಗಳೆಲ್ಲವೂ ಸಕಲರಿಗೂ ಶುಭ ತರಲಿ.

**– ಎನ್. ಶಂಕರರಾವ್**

## IV. ಚಟುವಟಿಕೆಗಳು :

೧. ಶಿಕ್ಷಕರ ದಿನವನ್ನು ನೀವು ಆಚರಿಸುವ ರೀತಿ ಬರೆಯಿರಿ.

..........................................................................................................

..........................................................................................................

..........................................................................................................

..........................................................................................................

..........................................................................................................

..........................................................................................................

..........................................................................................................

..........................................................................................................

೨. ನಿಮ್ಮ ಮನೆಯಲ್ಲಿ ಆಚರಿಸುವ ಯಾವುದಾದರೊಂದು ಹಬ್ಬದ ವಿಶೇಷತೆಗಳನ್ನು ಬರೆಯಿರಿ.

..........................................................................................................

..........................................................................................................

..........................................................................................................

..........................................................................................................

..........................................................................................................

..........................................................................................................

..........................................................................................................

..........................................................................................................





# ಪದ್ಯ ಪಾಠ – ೭

## ಸಾರುತಿದೆ ಸೃಷ್ಟಿ




– ಸಿದ್ಧಯ್ಯಪುರಾಣಿಕ



ಹಣ್ಣಿನಲಿ ಬೆಣ್ಣೆಯಲಿ ಕೆನೆಮೊಸರು ಹಾಲಿನಲಿ
ಕಂದದಲಿ ಜೇನಿನಲಿ ರಸಗಬ್ಬು ಬಾಳೆಯಲಿ
ಎಳೆನೀರು ಹೊಳೆನೀರು ಹಾಲ್ದೆನೆಯ ಕಾಳಿನಲಿ
ಸಾರುತಿದೆ ಸೃಷ್ಟಿಯಿದು ಸವಿಯಾಗಿ ನಿಂದು
ಸವಿಯಾಗು ಸವಿಯಾಗು ಸವಿಯಾಗು! ಎಂದು. ॥ ೧ ॥

ತಾರೆಯಲಿ ಚಂದ್ರನಲಿ ಸೂರ್ಯನಲಿ ರನ್ನದಲಿ
ಕಂಚಿನಲಿ ಮಿಂಚಿನಲಿ ಮುತ್ತಿನಲಿ ಚಿನ್ನದಲಿ
ಜ್ಯೋತಿಯಲಿ ನಯನದಲಿ ಉಷೆಯ ಹೊಂಬಣ್ಣದಲಿ
ಸಾರುತಿದೆ ಸೃಷ್ಟಿಯಿದು ಛವಿಯಾಗಿ ನಿಂದು
ಛವಿಯಾಗು ಛವಿಯಾಗು, ಛವಿಯಾಗು! ಎಂದು ॥ ೨ ॥

ಶಬ್ದದಲಿ ಸವಿಯಾಗಿ ಅರ್ಥದಲಿ ಬೆಳಕಾಗಿ
ಬಾಳ ಭವ್ಯತೆಗಿಲ್ಲಿ ಬೆಳಕು ಸವಿ ಸಾಕಾಗಿ
ಬಾಳುವೆಯ ಸವಿ ಬೆಳಕ ಬರೆಯುವವ ಬೇಕಾಗಿ
ಸಾರುತಿದೆ ಸೃಷ್ಟಿ ಸವಿ ಛವಿಯಾಗಿ ನಿಂದು–
ಕವಿಯಾಗು ಕವಿಯಾಗು ಕವಿಯಾಗು! ಎಂದು ॥ ೩ ॥

## ಕೃತಿಕಾರರ ಪರಿಚಯ :



**ಕವಿ ಸಿದ್ಧಯ್ಯಪುರಾಣಿಕ** ಅವರು ೧೯೧೮ ರಲ್ಲಿ ಕೊಪ್ಪಳ ಜಿಲ್ಲೆಯ ಯಲಬುರ್ಗ ತಾಲೂಕಿನ ದ್ಯಾಂಪುರದಲ್ಲಿ ಜನಿಸಿದರು. ಇವರು 'ಕಾವ್ಯಾನಂದ' ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದವರು. ಐ.ಎ. ಎಸ್. ಅಧಿಕಾರಿಯಾಗಿ ಕರ್ನಾಟಕದಾದ್ಯಂತ ಕೆಲಸ ಮಾಡಿದ್ದಾರೆ. ಇವರು ಕಾವ್ಯ, ನಾಟಕ, ಪ್ರಬಂಧ, ಜೀವನಚರಿತ್ರೆ ಮತ್ತು ವಚನಗಳನ್ನು ರಚಿಸಿದ್ದಾರೆ.

ಇವರ 'ಶರಣ ಚರಿತಾಮೃತ' ಕೃತಿಯು ಹೊಸಗನ್ನಡ ಗದ್ಯ ಸಾಹಿತ್ಯಕ್ಕೆ ದೊಡ್ಡ ಕೊಡುಗೆ. 'ಜಲಪಾತ', 'ಕರುಣಾಶ್ರಾವಣ', 'ಮಾನಸ ಸರೋವರ', 'ಮೊದಲು ಮಾನವನಾಗು', 'ವಚನೋದ್ಯಾನ' ಮುಂತಾದವು ಇವರ ಕವನ ಸಂಕಲನಗಳು. ಇವರಿಗೆ 'ಭಿಲ್ವಾರ' ಪ್ರಶಸ್ತಿ ಮತ್ತು ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ಲಭಿಸಿವೆ. ಇವರು ೧೯೯೪ ರಲ್ಲಿ ಮರಣ ಹೊಂದಿದರು.



ಸಾರುತಿದೆ ಸೃಷ್ಟಿ ಪದ್ಯವನ್ನು 'ಕರುಣಾಶ್ರಾವಣ' ಕವನ ಸಂಕಲನದಿಂದ ಆಯ್ದುಕೊಳ್ಳಲಾಗಿದೆ. ಕವಿತೆಯಲ್ಲಿ ನಿಸರ್ಗದ ಮೂಲಕ ಕವಿ ಸಂದೇಶವನ್ನು ನೀಡುತ್ತಿದ್ದಾರೆ. ಮೊದಲ ನುಡಿಯಲ್ಲಿ ಸಿಹಿರುಚಿಯನ್ನು ಹೊಂದಿರುವ ವಸ್ತುಗಳ ಮೂಲಕ ಮಾನವ ಸಿಹಿಯಾಗು ಎನ್ನುತ್ತಾರೆ. ಎರಡನೆಯ ನುಡಿಯಲ್ಲಿ ಬೆಳಕನ್ನು ಕೊಡುವ ವಸ್ತುಗಳ ಉದಾಹರಣೆ ನೀಡುತ್ತಾರೆ. ಅದರಂತೆ ಮಾನವ ನಿನ್ನಲ್ಲಿ ಜ್ಞಾನದ ಬೆಳಕನ್ನು ಹೆಚ್ಚಿಸಿಕೋ ಎಂದು ಹೇಳುತ್ತಾರೆ. ಕೊನೆಯ ನುಡಿಯಲ್ಲಿ ಸವಿಯಾದ ಗುಣಗಳನ್ನು ರೂಢಿಸಿಕೊಂಡು ಅರ್ಥಪೂರ್ಣವಾಗಿ ಬರೆಯುವ ಕವಿಯಾಗು ಎಂದು ಆಶಿಸುತ್ತಾರೆ.

# ಅಭ್ಯಾಸ

## I. ಪದಗಳ ಅರ್ಥ :

**ಉಷೆ** – ಅರುಣೋದಯ

**ಕೆನೆಮೊಸರು** – ಕೆನೆ ಸಹಿತವಾದ ಮೊಸರು.

**ಜ್ಯೋತಿ** – ಬೆಳಕು; ದೀಪ.

**ನಯನ** – ಕಣ್ಣು; ಅಕ್ಷಿ; ನೇತ್ರ.

**ರಸಗಬ್ಬು** – ರಸಪೂರಿತವಾದ ಕಬ್ಬು.

**ಸವಿ** – ರುಚಿ; ಸಿಹಿ.

**ಸಾರು** – ಘೋಷಿಸು; ಹೇಳು; ಪ್ರಕಟಪಡಿಸು.

**ಹೊಂಬಣ್ಣ** – ಬಂಗಾರದ ಬಣ್ಣ.

**ಕಂದ** – ಗೆಡ್ಡೆ

**ಛವಿ** – ಹೊಳಪು; ಕಾಂತಿ; ಬಣ್ಣ.

**ತಾರೆ** – ನಕ್ಷತ್ರ

**ಭವ್ಯ** – ಉನ್ನತವಾದ

**ರನ್ನ** – ರತ್ನ

**ಸೃಷ್ಟಿ** – ಪ್ರಕೃತಿ; ರಚನೆ.

**ಹಾಲ್ದೆನೆ** – ಎಳೆ ಕಾಳುಗಳಿರುವ ತೆನೆ.

## II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಕವಿಯು ಸೃಷ್ಟಿಯ ಯಾವ ಯಾವ ವಸ್ತುಗಳಲ್ಲಿ ಸವಿಯಿದೆ ಎನ್ನುತ್ತಾರೆ?

೨. ಯಾವ ಯಾವ ವಸ್ತುಗಳಲ್ಲಿ ಪ್ರಕೃತಿ ಛವಿಯಾಗಿ ನಿಂತಿದೆ?

೩. ಕಾವ್ಯದಲ್ಲಿ ಶಬ್ದ ಮತ್ತು ಅರ್ಥಗಳು ಹೇಗಿರಬೇಕೆಂದು ಕವಿ ಹೇಳುತ್ತಾರೆ?

೪. ಬಾಳುವೆಯ ಸವಿಬೆಳಕನ್ನು ಎಲ್ಲಿ ಕಾಣಬೇಕು?

**ಆ) ಕೆಳಗಿನ ಪ್ರಶ್ನೆಗಳಿಗೆ ಮೂರು–ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಕವಿ ನಮ್ಮ ಬದುಕು ಯಾವ ರೀತಿ ಸವಿಯಾಗಬೇಕೆಂದು ಬಯಸುತ್ತಾರೆ?

೨. ಬದುಕು ಛವಿಯಾಗಬೇಕು ಎಂಬುದಕ್ಕೆ ಕವಿ ಕೊಡುವ ಉದಾಹರಣೆಗಳಾವುವು?

೩. ಸಿದ್ಧಯ್ಯಪುರಾಣಿಕರು ಯಾವ ರೀತಿಯ ಕವಿ ಆಗಬೇಕೆಂದು ಹೇಳುತ್ತಾರೆ?

**ಇ) ಈ ಪದ್ಯಭಾಗವನ್ನು ಪೂರ್ಣಗೊಳಿಸಿ, ಕಂಠಪಾಠ ಮಾಡಿರಿ.**

ಹಣ್ಣಿನಲಿ ..................................................

..................................................................

..................................................................

...................................... ಸವಿಯಾಗು ಎಂದು

**ಈ) ಬಿಟ್ಟ ಸ್ಥಳಗಳನ್ನು ನೀಡಿರುವ ನಾಲ್ಕು ಆಯ್ಕೆಯ ಉತ್ತರಗಳಲ್ಲಿ ಸರಿಯಾದುದನ್ನು ಆರಿಸಿ ಬರೆಯಿರಿ.**

೧. ಸವಿಯಿರುವುದು ಇವುಗಳಲ್ಲಿ ..............................

೧) ಹಣ್ಣಿನಲಿ ಬೆಣ್ಣೆಯಲಿ  ೨) ತಾರೆಯಲಿ ಚಂದ್ರನಲಿ

೩) ಕಲ್ಲಿನಲಿ ಮುಳ್ಳಿನಲಿ  ೪) ಮುತ್ತಿನಲಿ ಚಿನ್ನದಲಿ

೨. ಎಳೆನೀರು ಹೊಳೆನೀರು ಹಾಲ್ದನೆಯ ಕಾಳಿನಲಿ ಸಾರುತಿದೆ ಸೃಷ್ಟಿ .................ನಿಂದು

೧) ಛವಿಯಾಗಿ  ೨) ಸವಿಯಾಗಿ

೩) ಕವಿಯಾಗಿ  ೪) ಬೆಳಕಾಗಿ

೩. ಛವಿ ಇರುವುದು ಇವುಗಳಲ್ಲಿ ..............................

೧) ಕಂದದಲಿ ಜೇನಿನಲಿ  ೨) ತಾರೆಯಲಿ ಚಂದ್ರನಲಿ

೩) ಹಾಲ್ದನೆಯ ಕಾಳಿನಲಿ  ೪) ಕಲ್ಲಿನಲಿ ಮುಳ್ಳಿನಲಿ

೪. ಕಾವ್ಯದಲ್ಲಿ ಶಬ್ದ ಸವಿಯಾಗಿ, ಅರ್ಥ ............... ಇರಬೇಕೆಂದು ಕವಿ ಹೇಳುವನು.

೧) ಸಿಹಿಯಾಗಿ  ೨) ಸವಿಯಾಗಿ

೩) ಒಗರಾಗಿ  ೪) ಬೆಳಕಾಗಿ

೫. ಬಾಳುವೆಯ ಸವಿ ಬೆಳಕ ............................... ಬೇಕಾಗಿದೆ.

೧) ಓದುವವ　　　　೨) ನೋಡುವವ

೩) ಕೇಳುವವ　　　　೪) ಬರೆಯುವವ

## III. ಭಾಷಾಭ್ಯಾಸ :

### ಅ) ಈ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿ ಬರೆಯಿರಿ.

೧. ಸಾರು : ......................................................................................

೨. ಸೃಷ್ಟಿ : ......................................................................................

೩. ಸವಿ : ......................................................................................

೪. ಹೊಂಬಣ್ಣ : ......................................................................................

೫. ಛವಿ : ......................................................................................



### ಆ) 'ಸಾರುತಿದೆ ಸೃಷ್ಟಿ' ಕವಿತೆಯಲ್ಲಿ ಬಳಕೆಯಾಗಿರುವ ಪ್ರಾಸ ಪದಗಳನ್ನು ಹುಡುಕಿ ಬರೆಯಿರಿ.

**ಮಾದರಿ :** ಹಣ್ಣಿನಲಿ – ಬೆಣ್ಣೆಯಲಿ

೧. ಎಳೆನೀರು – .........................　　೨. ಕಂಚು – ...........................

೩. ಸವಿ – .........................　　೪. ರನ್ನ – ...........................

### ಇ) ಈ ಪದಗಳನ್ನು ಬಿಡಿಸಿ ಬರೆದಿದೆ ಗಮನಿಸಿ, ಓದಿರಿ.

| | | | | |
|---|---|---|---|---|
| ೧. ಹಾಲ್ಜೇನೆ | = | ಹಾಲು | + | ತೆನೆ |
| ೨. ರಸಗಬ್ಬು | = | ರಸ | + | ಕಬ್ಬು |
| ೩. ಸೃಷ್ಟಿಯಿದು | = | ಸೃಷ್ಟಿ | + | ಇದು |
| ೪. ಸವಿಯಾಗು | = | ಸವಿ | + | ಆಗು |
| ೫. ಛವಿಯಾಗಿ | = | ಛವಿ | + | ಆಗಿ |

## ಪೂರಕ ಓದು :

**(ಈ ಕೆಳಗಿನ ಕಥೆ ಓದಿ, ಪ್ರಸ್ತುತ ಪದ್ಯದ ಭಾವಾರ್ಥದೊಂದಿಗೆ ಇರುವ ಸಂಬಂಧ ತಿಳಿಯಿರಿ)**

ಮಾವಿನ ತೋಪು. ಇಡೀ ತೋಪು ಮಾವಿನಕಾಯಿ ಹಣ್ಣುಗಳಿಂದ ತುಂಬಿತ್ತು. ಅದು ನೋಡುಗರ ಕಣ್ಮನ ಸೆಳೆಯುತ್ತಿತ್ತು. ಮಕ್ಕಳು ಹಣ್ಣನ್ನು ಪಡೆಯಲು ಕಲ್ಲು ಬೀಸುತ್ತಿದ್ದರು. ಒಬ್ಬ ಹುಡುಗಿ ಮಾವಿನ ಹಣ್ಣಿಗಾಗಿ ಕಲ್ಲು ಬೀಸಿದಳು. ಆ ಸಂದರ್ಭದಲ್ಲಿ ಅದೇ ರಸ್ತೆಯಲ್ಲಿ ಹೋಗುತ್ತಿದ್ದ ರಾಜನಿಗೆ ಕಲ್ಲು ಬಡಿಯಿತು. ರಾಜನು ಕಲ್ಲು ಬಂದ ದಿಕ್ಕಿಗೆ ನೋಡಿದನು. ಅವನ ಸೈನಿಕರು ಈ ದೃಶ್ಯ ನೋಡಿ ಗಾಬರಿಯಾದರು. ಓಡಿ ಹೋಗಿ ಕಲ್ಲು ಬೀರಿದ ಹುಡುಗಿಯನ್ನು ಹಿಡಿದು ತಂದರು.

ಆ ಹುಡುಗಿಗೆ ಸೈನಿಕರು "ರಾಜನಿಗೆ ಏಕೆ ಕಲ್ಲು ಬೀಸಿದೆ?" ಎಂದು ಕೇಳಿದರು. ಹುಡುಗಿಯು "ನಾನು ರಾಜನಿಗೆ ಕಲ್ಲು ಬೀಸಲಿಲ್ಲ. ಮಾವಿನ ಮರಕ್ಕೆ ಬೀಸಿದೆ. ಅದು ಆಕಸ್ಮಿಕವಾಗಿ ರಾಜನಿಗೆ ಬಡಿದಿದೆ. ಕ್ಷಮಿಸಿ ನನ್ನ ತಪ್ಪಿಲ್ಲ" ಎಂದಳು.

ಸೈನಿಕರು "ರಾಜನಿಗೆ ಕಲ್ಲು ಬೀಸಿದ್ದಕ್ಕೆ ಶಿಕ್ಷೆ ಏನು ಗೊತ್ತೇ? ಛಡಿ ಏಟು!" ಎಂದು ಭಯ ಹುಟ್ಟಿಸಿದರು. ಆಗ ಅವಳು ರಾಜನ ಹತ್ತಿರ ಹೋಗಿ "ಸ್ವಾಮಿ ಮರಕ್ಕೆ ಕಲ್ಲು ಬೀಸಿದರೆ ಅದು ಹಣ್ಣು ಕೊಡುತ್ತದೆ. ಆದರೆ ಆಕಸ್ಮಿಕವಾಗಿ ನಿಮಗೆ ಕಲ್ಲು ಬಿದ್ದುದಕ್ಕೆ ನನಗೆ ಛಡಿ ಏಟು ಕೊಡುವುದಾದರೆ ಛಡಿ ಏಟು ಕೊಡಿ" ಎಂದಳು.

ರಾಜನು ಅವಳ ಜಾಣತನಕ್ಕೆ ಮೆಚ್ಚಿದನು. "ನೀನು ಜಾಣ ಹುಡುಗಿ. ಮರ ಕಲ್ಲು ಬೀರಿದವರಿಗೆ ಹಣ್ಣು ಕೊಡುತ್ತದೆ. ಆಕಸ್ಮಿಕವಾಗಿ ಕಲ್ಲು ತಗಲಿದ್ದಕ್ಕೆ ಛಡಿ ಏಟು ಕೊಡುವಷ್ಟು ಕಟುಕನಲ್ಲ ನಾನು. ಈ ತೋಟವನ್ನ ನಿನಗೆ ಬಹುಮಾನ ಕೊಡುತ್ತೇನೆ" ಎಂದು ಅವಳನ್ನು ಸಂತೈಸಿದನು.



### ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.

೧. ಮಾವಿನ ತೋಪು ನೋಡುಗರ ಕಣ್ಮನ ಸೆಳೆಯುತ್ತಿತ್ತು ಏಕೆ?

೨. ಹುಡುಗಿ ಮಾವಿನಮರಕ್ಕೆ ಏಕೆ ಕಲ್ಲು ಎಸೆದಳು?

೩. ಸೈನಿಕರು ಹುಡುಗಿಯನ್ನು ರಾಜನ ಬಳಿ ಏಕೆ ಹಿಡಿದು ತಂದರು?

೪. ಸೈನಿಕರು ಕಲ್ಲು ಹೊಡೆದ ಹುಡುಗಿಗೆ ಯಾವ ಶಿಕ್ಷೆ ಸಿಗುತ್ತದೆಂದು ಹೇಳಿದರು?

೫. ರಾಜನು ಹುಡುಗಿಗೆ ತೋಟವನ್ನು ಬಹುಮಾನವಾಗಿ ಏಕೆ ಕೊಟ್ಟನು?

ಈ ಮೂರು ಕೋತಿಗಳು ಬದುಕು ಸವಿಯಾಗುವ ಸಂದೇಶವನ್ನು ನೀಡುತ್ತಿವೆ. ನೀವು ಗುರುತಿಸಿ ಬರೆಯಿರಿ.











## ಗದ್ಯ ಪಾಠ – ೮

# ಸಾಹಸಿ ಮಹಿಳೆಯರು




### ೧. ಆರ್. ಕಲ್ಯಾಣಮ್ಮ :



ಮಹಿಳೆಯರ ಮತ್ತು ಮಕ್ಕಳ ಏಳಿಗೆಗೆ ಮತ್ತೊಂದು ಹೆಸರು ಆರ್. ಕಲ್ಯಾಣಮ್ಮ. ಇವರು ಬೆಂಗಳೂರಿನವರು. ಇವರು ೧೮೯೧ ರಲ್ಲಿ ಜನಿಸಿದರು. ತಾಯಿ ಜಾನಕಮ್ಮ; ತಂದೆ ರಾಮಸ್ವಾಮಿ ಅಯ್ಯಂಗಾರ್. ಪ್ರಾಥಮಿಕ ಶಿಕ್ಷಣವನ್ನು ಬೆಂಗಳೂರಿನಲ್ಲಿ ಪಡೆದರು. ಓದುತ್ತಿರುವಾಗಲೇ ಮದುವೆಯಾಯಿತು. ಮೂರು ತಿಂಗಳೊಳಗೆ ಗಂಡನನ್ನು ಕಳೆದುಕೊಂಡರು. ಸಂಸಾರದ ಸುಂದರ ಕನಸು ಪುಡಿ ಪುಡಿಯಾಯಿತು. ದಿಕ್ಕು ತೋರದಂತಾಯಿತು. ಭವಿಷ್ಯವೇ ಬಿದ್ದುಹೋಯಿತು. ಆದರೂ ಎದೆಗುಂದಲಿಲ್ಲ. ಮನೆಯಲ್ಲಿಯೇ ಓದಿದರು. ಎಲ್.ಎಸ್.ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಆ ಕಾಲದಲ್ಲಿ ಇದೊಂದು ಸಾಹಸವೇ ಆಗಿತ್ತು. ಓದುವ ಆಸೆ ಬಹಳವಾಗಿತ್ತು. ಆದರೆ ಅನನುಕೂಲತೆಯಿಂದ ಮುಂದೆ ಓದಲಾಗಲಿಲ್ಲ. ಆದರೂ ಮನೆಯಲ್ಲಿಯೇ ಓದು ಮುಂದುವರೆಸಿದರು. ಇದರಿಂದ ಅವರ ವಿಚಾರ ಶಕ್ತಿಗೆ ಹೊಸ ಹೊಳಪು ಬಂತು.

ಅಬಲೆಯರ ದೀನತೆ ಮತ್ತು ಮಕ್ಕಳ ಶೋಷಣೆಯ ಬಗೆಗೆ ಚಿಂತಿಸಿದರು. ಅಂತಹವರ ನೋವು-ಸಂಕಟಗಳನ್ನು ಪರಿಹರಿಸುವ ದಾರಿಯನ್ನು ಆರಿಸಿಕೊಂಡರು. ಅದಕ್ಕಾಗಿ "ಶ್ರೀ ಶಾರದಾ ಸ್ತ್ರೀ ಸಮಾಜ"ವನ್ನು ಕಟ್ಟಿದರು. ವಿಶೇಷ ತರಬೇತಿ ಆರಂಭಿಸಿದರು. ಹಣಕಾಸಿನ ಸಬಲತೆ ತಂದುಕೊಡಲು ದುಡಿದರು. ಬಾಲಕಿಯರಿಗೆ ಶಿಕ್ಷಣ ಕೊಡಲು ಶಾಲೆಗಳನ್ನು ಪ್ರಾರಂಭಿಸಿದರು.

ಹೆಣ್ಣು ಮಕ್ಕಳ ಸಮಸ್ಯೆಗಳನ್ನು ಚರ್ಚಿಸುವುದಕ್ಕೆ 'ಸರಸ್ವತಿ ಪತ್ರಿಕೆ'ಯನ್ನು ಹುಟ್ಟು ಹಾಕಿದರು. ಈ ಪತ್ರಿಕೆಯ ಕೆಲಪುಟಗಳನ್ನು ಮಕ್ಕಳಿಗೂ ಮೀಸಲಾಗಿರಿಸಿದರು. ಮಕ್ಕಳಿಗಾಗಿ "ಅಖಿಲ ಕರ್ನಾಟಕ ಮಕ್ಕಳ ಕೂಟ' ಕಟ್ಟಿದರು. ಸುತ್ತಮುತ್ತಲಿನ ಮಕ್ಕಳನ್ನು ಸೇರಿಸಿದರು. ಮಕ್ಕಳ ಆಶಯಕ್ಕೆ ತಕ್ಕಂತೆ ಕಥೆ ಕಟ್ಟಿದರು. ನಾಟಕ ರಚಿಸಿದರು. ಕುಣಿಸಿದರು. ಆಟವಾಡಿಸಿದರು. ಮಕ್ಕಳಿಗೆ ಹೊಸ ಲೋಕವನ್ನೇ ತೆರೆದರು. ಈ ಎಲ್ಲಾ ಕೆಲಸಗಳು ಅವರಿಗೆ ತೃಪ್ತಿ ತಂದವು.

ಅನಾರೋಗ್ಯದಿಂದ ಬಳಲುತ್ತಿದ್ದರೂ ಮಕ್ಕಳ ಸಮ್ಮೇಳನದಲ್ಲಿ ಭಾಗವಹಿಸಿದರು. ಮಹಿಳೆಯರ ಮತ್ತು ಮಕ್ಕಳ ಕಲ್ಯಾಣಕ್ಕಾಗಿ ತನ್ನ ಕಷ್ಟಕೋಟಲೆಗಳನ್ನು ಬದಿಗಿಟ್ಟು ದುಡಿದ ಹಿರಿಯ ಜೀವಿ. ಇವರು ೧೯೬೫ ರಲ್ಲಿ ಮರಣ ಹೊಂದಿದರು.

## ೨. ಸ್ವಾತಂತ್ರ್ಯ ಹೋರಾಟಗಾರ್ತಿ ಬಡಿಗೇರ ಸೀತಮ್ಮ :

ಭಾರತಕ್ಕೆ ೧೯೪೭ ಆಗಸ್ಟ್ ೧೫ ರಂದು ಸ್ವಾತಂತ್ರ್ಯ ಸಿಕ್ಕ ದಿನ. ಅಂದು ತಿರಂಗಿ ಧ್ವಜವೇರಿಸಿ, “ವಂದೇ ಮಾತರಂ”, “ಬೋಲೋ ಭಾರತ್ ಮಾತಾಕಿ ಜೈ” ಎಂದು ಘೋಷಣೆ ಮಾಡುತ್ತ ಸಿಹಿ ಹಂಚಿದ ದಿನ. ಕೋಟಿ ಕೋಟಿ ಜನರ ಕನಸು ನನಸಾದ ದಿನ. ಆದರೆ ಅಂದು ಭಾರತದೊಳಗಿನ ಹೈದ್ರಾಬಾದ ಸಂಸ್ಥಾನ ಮಾತ್ರ ಭಾರತದಲ್ಲಿ ವಿಲೀನವಾಗಲಿಲ್ಲ. ಇಲ್ಲಿ ಭಾರತದ ತ್ರಿವರ್ಣ ಧ್ವಜವನ್ನು ನಿಷೇಧಿಸಲಾಗಿತ್ತು. ಇದರಿಂದ ಹೈದ್ರಾಬಾದ್ ಪ್ರಾಂತದ ಜನರು ನಿಜಾಮನ ವಿರುದ್ಧ ಸಿಡಿದೆದ್ದರು.

ಆಗಿನ ಹೈದ್ರಾಬಾದ್ ಪ್ರಾಂತದಲ್ಲಿ ರಾಯಚೂರು ಜಿಲ್ಲೆಯೂ ಒಂದು. ಆ ಜಿಲ್ಲೆಯ ಕುಷ್ಟಗಿ ತಾಲೂಕಿನ ಮಾಲಗತ್ತಿ ಗ್ರಾಮದಲ್ಲಿ ಜನ ಸೇರಿದರು. ಸುತ್ತಮುತ್ತಲಿನ ಹಳ್ಳಿಗಳಿಂದ ಸಾವಿರಾರು ಜನರು ಬಂದರು. ಊರ ದೇವತೆ ಕೆಂಚವ್ವನ ಗುಡಿಯ ಬಯಲಿನಲ್ಲಿ ಭಾರತದ ತ್ರಿವರ್ಣ ಧ್ವಜವೇರಿಸಲು ನಿರ್ಧರಿಸಿದರು. ಸಿದ್ಧತೆ ಮಾಡಲು ಪ್ರಾರಂಭಿಸಿದರು.





ಆಗ ಜನರ ಮಧ್ಯ ಇಪ್ಪತ್ತು ವರುಷದ ತರುಣಿ ಕುಣಿಯುತ್ತ ಬಂದಳು. ಎಡಗೈಯಲ್ಲಿ ಧ್ವಜ ಬಲಗೈಯಲ್ಲಿ ಕುಡಗೋಲು, ಅವಳು ಸಾಕ್ಷಾತ್ ಕಾಳಿಯಂತೆ ಕಾಣುತ್ತಿದ್ದಳು. ದುಂಡು ಮುಖ, ಹಣೆ ತುಂಬ ಕುಂಕುಮ, ಮೂಗಿನಲ್ಲಿ ನತ್ತು. ಕಚ್ಚೆ ಹಾಕಿದ ಇಲಕಲ್ಲ ಸೀರೆ, ಅವಳಲ್ಲಿ ಭಾವಾವೇಶ ತುಂಬಿತ್ತು. ಹಲಗೆ ಸಪ್ಪಳಕ್ಕೆ ರಣಭೈರವಿಯಂತೆ ಕುಣಿಯುತ್ತಿದ್ದಳು. ತಿರಂಗಿ ಧ್ವಜವನ್ನು ಅವಳೇ ಏರಿಸಿದಳು. ಜನ ಜೈ ಎಂದು ಘೋಷಿಸಿದರು. ಜೈ-ಹಿಂದ್ ಧ್ವನಿ ಎಲ್ಲೆಡೆ ಮೊಳಗಿತು. ಆ ಧ್ವಜವೇರಿಸಿದ ತರುಣಿಯೇ ಬಡಿಗೇರ ಸೀತಮ್ಮ. ತಂದೆ ಬಸಪ್ಪ ತಾಯಿ ಶ್ಯಾವಂತ್ರೆವ್ವ. ಊರು ಮಾಲಗತ್ತಿ.

ಧ್ವಜವೇರಿಸುವ ಈ ಕಾರ್ಯಕ್ರಮ ತಡೆಯಲು ಬಂದ ಕೆಲವೇ ಪೊಲೀಸರು ಜನರನ್ನು ನೋಡಿ ದಂಗಾದರು. ಜನಜಂಗುಳಿಗೆ ಹೆದರಿ ಮೂಕಪ್ರೇಕ್ಷಕರಾದರು. ಮುಂದೆ ಈ ಹುಡುಗಿ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಳು. ಹೈದ್ರಾಬಾದ್ ಪ್ರಾಂತ ೧೯೪೮ ಸೆಪ್ಟಂಬರ್ ೧೭ ರಂದು ಭಾರತದಲ್ಲಿ ವಿಲೀನವಾಯಿತು. ಬಡಿಗೇರ ಸೀತಮ್ಮ ೭೦ ನೆಯ ವಯಸ್ಸಿನಲ್ಲಿ (೧೪.೦೧.೧೯೯೮) ಸ್ವಾತಂತ್ರ್ಯಜ್ಯೋತಿಯಲ್ಲಿ ವಿಲೀನವಾದಳು.

* * * *



## ಅಭ್ಯಾಸ

### I. ಪದಗಳ ಅರ್ಥ :

**ಅನಾರೋಗ್ಯ** – ರೋಗದಿಂದ ನರಳುವುದು.
**ಏಳಿಗೆ** – ಅಭಿವೃದ್ಧಿ; ಉನ್ನತಿ.
**ಘೋಷಣೆ** – ಗಟ್ಟಿಯಾದ ಕೂಗು.
**ದೀನತೆ** – ಬಡತನ
**ನಿಷೇಧ** – ನಿರಾಕರಣೆ
**ಬಹಿಷ್ಕಾರ** – ಹೊರಕ್ಕೆ ಹಾಕು.
**ವಿಚಾರಶಕ್ತಿ** – ಆಲೋಚನಾ ಶಕ್ತಿ.
**ಸಬಲ** – ಶಕ್ತಿವಂತ
**ಹಲಗೆ** – ತಮಟೆ
**ಆಶಯ** – ಆಸೆ; ಇಂಗಿತ.
**ಕಷ್ಟಕೋಟಲೆ** – ಕಷ್ಟಗಳ ಸರಮಾಲೆ.
**ದಂಗಾಗು** – ಆಶ್ಚರ್ಯಪಡು
**ನತ್ತು** – ಮೂಗುತಿ
**ಪುಡಿಪುಡಿಯಾಗು** – ಚೂರುಚೂರಾಗು.
**ಭಾವಾವೇಶ** – ಉದ್ರೇಕ
**ವಿಲೀನ** – ಐಕ್ಯವಾಗು; ಕಣ್ಮರೆಯಾಗು.
**ಸಿಡಿದೇಳು** – ರೊಚ್ಚಿಗೇಳು; ಕೋಪಗೊಳ್ಳು.
**ಹುಟ್ಟುಹಾಕು** – ಪ್ರಾರಂಭಿಸು

## ಗಮನಿಸಿ ತಿಳಿಯಿರಿ :

೧. **ದಿಕ್ಕುತೋರದಂತಾಗು** – ಏನು ಮಾಡಲೂ ತಿಳಿಯದಂತಾಗು; ತೋಚದಂತಾಗು.
೨. **ಎಲ್.ಎಸ್.** – ಲೋಯರ್ ಸೆಕೆಂಡರಿ; ೭ ನೇ ತರಗತಿ.
೩. **ಸಂಸ್ಥಾನ** – ದೇಶದ ಒಂದು ವಿಭಾಗ / ರಾಜ್ಯ.
೪. **ತಿರಂಗಿ** – ಮೂರು ಬಣ್ಣ ಹೊಂದಿದ ನಮ್ಮ ರಾಷ್ಟ್ರಧ್ವಜ.

## II. ಪ್ರಶ್ನೆಗಳು :

### ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಕಲ್ಯಾಣಮ್ಮ ಯಾರ ಏಳಿಗೆಗಾಗಿ ಚಿಂತಿಸಿದರು?
೨. ಕಲ್ಯಾಣಮ್ಮನವರ ವಿಚಾರಶಕ್ತಿಗೆ ಹೇಗೆ ಹೊಳಪು ಬಂದಿತು?
೩. ಹೈದ್ರಾಬಾದ್ ಪ್ರಾಂತ್ಯದ ಜನರು ನಿಜಾಮನ ವಿರುದ್ಧ ಏಕೆ ಸಿಡಿದೆದ್ದರು?
೪. ಮಾಲಗತ್ತಿ ಗ್ರಾಮದ ಜನರು ಎಲ್ಲಿ ಧ್ವಜ ಏರಿಸಲು ನಿರ್ಧರಿಸಿದರು?
೫. ಹೈದರಾಬಾದ್ ಪ್ರಾಂತ್ಯ ಭಾರತದಲ್ಲಿ ಯಾವಾಗ ವಿಲೀನವಾಯಿತು?



### ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿ.

೧. ಕಲ್ಯಾಣಮ್ಮ ಮಕ್ಕಳಿಗಾಗಿ ಯಾವ ಯಾವ ಕೆಲಸಗಳನ್ನು ಮಾಡಿದರು?
೨. ಕಲ್ಯಾಣಮ್ಮನವರ ಜೀವನದಲ್ಲಿ ಬಂದು ಎರಗಿದ ಕಷ್ಟಗಳಾವುವು?
೩. ಧ್ವಜವೇರಿಸಲು ಬಂದ ಸೀತಮ್ಮನ ರೂಪವನ್ನು ವರ್ಣಿಸಿರಿ.

### ಇ) 'ಅ' ಪಟ್ಟಿಗೆ 'ಬ' ಪಟ್ಟಿಯನ್ನು ಹೊಂದಿಸಿ ಬರೆಯಿರಿ.

| 'ಅ' ಪಟ್ಟಿ | 'ಬ' ಪಟ್ಟಿ |
|---|---|
| ಅ) ಬಡಿಗೇರ ಸೀತಮ್ಮ | ೧) ಸರಸ್ವತಿ ಪತ್ರಿಕೆ |
| ಆ) ಶ್ಯಾವಂತ್ರೆವ್ವ | ೨) ರಾಮಸ್ವಾಮಿ ಅಯ್ಯಂಗಾರ್ |
| ಇ) ಜಾನಕಮ್ಮ | ೩) ಬಸಪ್ಪ |
| ಈ) ಆರ್. ಕಲ್ಯಾಣಮ್ಮ | ೪) ಸ್ವಾತಂತ್ರ್ಯ ಹೋರಾಟಗಾರ್ತಿ |
| | ೫) ನಿಜಾಮ |

ಈ) ಬಿಟ್ಟ ಸ್ಥಳವನ್ನು ನೀಡಿರುವ ನಾಲ್ಕು ಆಯ್ಕೆಯ ಉತ್ತರಗಳಲ್ಲಿ ಸರಿಯಾದುದನ್ನು ಆರಿಸಿ ಬರೆಯಿರಿ.

೧. ಭಾರತಕ್ಕೆ ಸ್ವಾತಂತ್ರ್ಯ ದೊರೆತರೂ ____________ ಭಾರತದಲ್ಲಿ ವಿಲೀನವಾಗಲಿಲ್ಲ.

ಅ) ಹೈದ್ರಾಬಾದ್ ಬ) ಸಿಕಂದರಾಬಾದ್

ಕ) ಅಲಹಾಬಾದ ಡ) ಅಹಮದಾಬಾದ್

೨. ಆರ್.ಕಲ್ಯಾಣಮ್ಮನವರು ____________ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಅ) ಎಸ್.ಎಸ್.ಎಲ್.ಸಿ. ಬ) ಎಲ್.ಎಸ್.

ಕ) ಪಿ.ಯು.ಸಿ. ಡ) ಬಿ.ಎ.

೩. ಕಲ್ಯಾಣಮ್ಮನವರು ಹುಟ್ಟುಹಾಕಿದ ಪತ್ರಿಕೆಯ ಹೆಸರು ____________

ಅ) ಶಾರದಾ ಪತ್ರಿಕೆ ಬ) ಸರಸ್ವತಿ ಪತ್ರಿಕೆ

ಕ) ಮಕ್ಕಳ ಬಾವುಟ ಡ) ಮಕ್ಕಳ ಕೂಟ

೪. ಬಡಿಗೇರ ಸೀತಮ್ಮನ ಊರು ____________

ಅ) ಬೆಂಗಳೂರು ಬ) ಹೈದ್ರಾಬಾದ್

ಕ) ಮಾಲಗತ್ತಿ ಡ) ಧಾರವಾಡ

## III. ಭಾಷಾಭ್ಯಾಸ :

ಅ) ಮಾದರಿಯಂತೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.

**ಮಾದರಿ :** ಜಾಗ್ರತೆ x ಅಜಾಗ್ರತೆ

೧. ಅನುಕೂಲ x ____________

೨. ಅಬಲ x ____________

೩. ಆರೋಗ್ಯ x ____________

೪. ನೀತಿ x ____________

೫. ಉತ್ತೀರ್ಣ x ____________

**ಆ) ಮಾದರಿ ವಾಕ್ಯಗಳನ್ನು ಗಮನಿಸಿ. ಅದೇ ರೀತಿ ಗೆರೆ ಹಾಕಿದ ಪದಗಳನ್ನು ನಿಮ್ಮ ಸ್ವಂತ ವಾಕ್ಯದಲ್ಲಿ ಬಳಸಿ ಬರೆಯಿರಿ.**

೧. ಪ್ರವಾಹದಿಂದ ಜನ **ಕಷ್ಟಕೋಟಲೆಗಳಿಗೆ** ಒಳಗಾದರು.

_______________________________________________

೨. ನಾವು ಅನ್ಯಾಯದ ವಿರುದ್ಧ **ಸಿಡಿದೇಳಬೇಕು.**

_______________________________________________

೩. ಜೋಗ ಜಲಪಾತದ ಸೌಂದರ್ಯವನ್ನು ನೋಡಿ **ದಂಗಾದೆನು.**

_______________________________________________

೪. ಮೇಧಾ ಪಾಟ್ಕರ್ ನರ್ಮದಾ ಬಚಾವೋ ಆಂದೋಲವನ್ನು **ಹುಟ್ಟುಹಾಕಿದರು.**

_______________________________________________

೫. ವಿವೇಕಾನಂದರ ಲೇಖನಗಳನ್ನು ಓದಿ ಸುಭಾಷರು **ಭಾವಾವೇಶಕ್ಕೆ** ಒಳಗಾದರು.

_______________________________________________

೬. ಕಲ್ಯಾಣಮ್ಮ ಮತ್ತು ಬಡಿಗೇರ ಸೀತಮ್ಮ **ಅಬಲೆ**ಯರಲ್ಲ ಸಬಲೆಯರು.

_______________________________________________



**ಇ) ವಾಕ್ಯಗಳಲ್ಲಿ ಕಾಣುವ ಅರ್ಥ ವ್ಯತ್ಯಾಸವನ್ನು ತಿಳಿಯಿರಿ.**

೧. ಕಲ್ಯಾಣಮ್ಮನವರು ಶಿಕ್ಷಣವನ್ನು ಬೆಂಗಳೂರಿನಲ್ಲಿ ಪಡೆದರು.
೨. ಕಲ್ಯಾಣಮ್ಮನವರು ಶಿಕ್ಷಣವನ್ನು ಬೆಂಗಳೂರಿನಲ್ಲಿ ಪಡೆಯುತ್ತಾರೆ.
೩. ಕಲ್ಯಾಣಮ್ಮನವರು ಶಿಕ್ಷಣವನ್ನು ಬೆಂಗಳೂರಿನಲ್ಲಿ ಪಡೆಯುವರು.

ಇಂತಹ ಮೂರು ವಾಕ್ಯಗಳನ್ನು ನೀವು ರಚಿಸಿರಿ.

.......................................................................................................

.......................................................................................................

.......................................................................................................

**ಈ) ಕೆಳಗಿನ ಜೋಡಿ ಪದಗಳನ್ನು ಗಮನಿಸಿರಿ.**

೧. ನೋವು ಸಂಕಟ
೨. ಕಷ್ಟಕೋಟಲೆ
೩. ಸುತ್ತಮುತ್ತ
೪. ಜನ ಜಂಗುಳಿ

## ಪೂರಕ ಓದು :

**(ಕಿತ್ತೂರು ರಾಣಿ ಚೆನ್ನಮ್ಮನನ್ನು ಕುರಿತು ರಚಿತವಾಗಿರುವ ಈ ಕೆಳಗಿನ ಜನಪದ ಸಾಹಿತ್ಯವನ್ನು ಹಾಡಿರಿ ಹಾಗೂ ಪ್ರಸ್ತುತ ಗದ್ಯದಲ್ಲಿನ ವಿಚಾರಗಳೊಂದಿಗೆ ಇರುವ ಸಾಮ್ಯತೆಯನ್ನು ಗಮನಿಸಿರಿ.)**

ಕಿತ್ತೂರು ಚೆನ್ನಮ್ಮ ಸುತ್ತೂರು ಒಡತ್ಯಾಗಿ
ಕತ್ತಿ ಕವಚಗಳ ಉಡುಪುಟ್ಟು । ಅಬ್ಬರದಿ
ಬತ್ತಲಗುದರಿಯ ಜಿಗದಾಳೋ ॥

**– ತ್ರಿಪದಿ**

ಚಂಡಿಯೊ, ಚೌಡಿಯೊ, ಮಾರಿಯೊ, ಮಸಣಿಯೊ
ಖಂಡಿತ ಮಾನವಳಿವಳಲ್ಲಾ ಪುಂಡ ರಕ್ಕಸರ
ತರಿವಳು ಚಾಮುಂಡಿಯೇ ಇವಳು ಬೇರಲ್ಲಾ.

**– ಲಾವಣಿ**

ಕಿತ್ತೂರ ಕೋಟೆಯ ಸುತ್ತವರಿಯಿತ ಚಾಪ್ಲಿನ್ ದಂಡ
ಕಿತ್ತೂರ ದಂಡ ಜಯಘೋಷ ಹೊರ ಬಿಂತ ಹರಹರ
ಮಹಾದೇವೆಂದ.... ಕೋಲ
ಭರತ ಖಂಡದೊಳಗ ಮೊದಲ ಕಿತ್ತೂರ ರಾಜ್ಯ
ಪರಸತ್ತೆಯ ಕಿತ್ತೆಸೆಯಾಕ ಕದನ ಹೊಡಿತ....ಕೋಲ

**– ಕೋಲು ಪದ**



## ಪದ್ಯ ಪಾಠ – ೯




# ಅಮ್ಮ

ನಿನ್ನ ನುಡಿಯ ಜೇನಿನಲಿ
ಎದೆಯ ಒಲುಮೆಯ ಸಿರಿಯಲಿ
ಮುದ್ದೆ ಮಾಡಿ ಅನುರಾಗದಿ ನೀಡಿ
ಜೋಗುಳ ಹಾಡುವೆ ಲಾಲಿಯಲಿ ॥೧॥

ಮನೆಯ ಮೊದಲ ಪಾಠಶಾಲೆಯಲಿ
ಗುಟುಕಿಟ್ಟು ನಭಕೆ ಹಾರಲು ಕಲಿಸಿ
ತಪ್ಪು-ನೆಪ್ಪುಗಳ ಮರೆತು ಕರುಣೆಯಲಿ
ಊಟೆಯಂದದಿ ನೆಗೆನೆಗೆದು ಬರುವೆ ಅರಸಿ ॥೨॥

ಮಹಾತ್ಮನಿರಲಿ ಮಂಕನಿರಲಿ
ಜಗದೊಡೆಯನಾಗಲೆಂದು ಹರಸುವ ಮಾತೆ
ಗುರಿ ಮರೆತ ಬಾಳಿಗೆ ನೀ ದಿಕ್ಸೂಚಿ
ನೀ ಬರಿ ಅಮ್ಮಳಲ್ಲ, ನಡೆದಾಡುವ ದೇವತೆ ॥೩॥





– ಜಂಬಣ್ಣ ಅಮರಚಿಂತ

## ಕೃತಿಕಾರರ ಪರಿಚಯ :



ಕವಿ **ಜಂಬಣ್ಣ ಅಮರಚಿಂತ** ಅವರು ೧೯೪೫ ರಲ್ಲಿ ರಾಯಚೂರಿನಲ್ಲಿ ಜನಿಸಿದರು. ಇವರು ಪ್ರಗತಿಪರ ಚಿಂತನಶೀಲ ಬರಹಗಾರರು. 'ಮುಂಜಾವಿನ ಕೊರಳು' ಇವರ ಮೊದಲ ಕವನ ಸಂಕಲನ. 'ಅಧೋ ಜಗತ್ತಿನ ಅಕಾವ್ಯ', 'ಮಣ್ಣಲ್ಲಿ ಬಂದ ಅಕ್ಷರ', 'ಹರಿಯುವ ನದಿಗೆ ಮೈಯಲ್ಲ ಕಾಲು', 'ಗಜಲ್ ಮತ್ತು ರೂಬಾಯಿ' ಮುಂತಾದವು ಇವರ ಕವನ ಸಂಕಲನಗಳು.

ಇವರಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿವೆ.

'ಅಮ್ಮ' ಪದ್ಯವನ್ನು 'ಸುದ್ದಿಮೂಲ' ದಿನಪತ್ರಿಕೆಯಿಂದ ಆಯ್ದುಕೊಳ್ಳಲಾಗಿದೆ. ಮಾನವನ ಜೀವನದಲ್ಲಿ ತಾಯಿ ಕೇವಲ ಅಮ್ಮನಲ್ಲ. ಆಕೆ ದೇವತೆ. ಚಿಕ್ಕ ಮಗುವನ್ನು ಪ್ರೀತಿಯಿಂದ ಮುತ್ತು ನೀಡಿ ಉಣಿಸಿ, ಜೋಗುಳ ಹಾಡಿ, ತನ್ನ ಮಗು ಜಾಣನಿರಲಿ ಅಥವಾ ದಡ್ಡನಿರಲಿ ; ಅವನಿಗೆ ಒಳ್ಳೆಯದಾಗಲೆಂದು ಹಾರೈಸುವಳು. ಅಷ್ಟೇ ಅಲ್ಲ. ಜೀವನದ ಗುರಿಯ ಕಡೆಗೆ ಕರೆದೊಯ್ಯುವ ದಿಕ್ಸೂಚಿಯಂತೆ ಇರುವಳು. ಇಂತಹ ತಾಯಿಯನ್ನು ಬರಿ ಅಮ್ಮ ಅಲ್ಲ. ನಡೆದಾಡುವ ದೇವತೆ ಎಂದಿದ್ದಾರೆ ಕವಿಗಳು.



## ಅಭ್ಯಾಸ

### I. ಪದಗಳ ಅರ್ಥ :

**ಅನುರಾಗ** – ಪ್ರೀತಿ; ಪ್ರೇಮ; ವಾತ್ಸಲ್ಯ.

**ಅರಸಿ** – ಹುಡುಕಿ

**ಊಟೆ** – ನೀರಿನ ಚಿಲುಮೆ; ನೀರಿನ ಬುಗ್ಗೆ.

**ಒಲುಮೆ** – ಪ್ರೀತಿ; ಒಲವು.

**ಗುಟುಕು** – ಒಂದು ಸಲ ನುಂಗುವಷ್ಟು.

**ಜಗದೊಡೆಯ** – ಪರಮಾತ್ಮ

**ತಪ್ಪುನೆಪ್ಪು** – ತಪ್ಪು ಒಪ್ಪುಗಳು

**ದಿಕ್ಸೂಚಿ** – ದಿಕ್ಕನ್ನು ತಿಳಿಸುವ ಯಂತ್ರ.

**ನಭ** – ಆಕಾಶ; ಆಗಸ.

**ನುಡಿ** – ಮಾತು

**ನೆಗೆ** – ಹಾರು; ಜಿಗಿ.

**ಮಾತೆ** – ತಾಯಿ; ಅಮ್ಮ.

**ಸಿರಿ** – ಸಂಪತ್ತು

**ಹರಸು** – ಆಶೀರ್ವದಿಸು

## II. ಪ್ರಶ್ನೆಗಳು :

**ಅ) ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ತಾಯಿಯ ನುಡಿಯಲ್ಲಿ ಏನು ತುಂಬಿದೆ ಎಂದು ಕವಿ ಹೇಳುತ್ತಾರೆ?

೨. ತಾಯಿ ಜೋಗುಳವನ್ನು ಹೇಗೆ ಹಾಡುತ್ತಾಳೆ?

೩. ಮಗುವಿಗೆ ಮೊದಲ ಪಾಠಶಾಲೆ ಯಾವುದು?

೪. ಅಮ್ಮ ಯಾವುದಕ್ಕೆ ದಿಕ್ಸೂಚಿಯಾಗುವಳು?

೫. ಕವಿ ಅಮ್ಮನನ್ನು ಏನೆಂದು ಕರೆದಿದ್ದಾರೆ?

೬. ಜಂಬಣ್ಣ ಅಮರಚಿಂತ ಅವರ ಮೊದಲ ಕವನ ಸಂಕಲನ ಯಾವುದು?

**ಆ) ಈ ಕೆಳಗಿನ ಪ್ರಶ್ನೆಗಳಿಗೆ ಮೂರು–ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ತಾಯಿ ಪ್ರೀತಿಯಿಂದ ಲಾಲಿ ಹಾಡುವ ಬಗೆ ಹೇಗೆ?

೨. ತಾಯಿ ತನ್ನ ಮಗುವನ್ನು ಹೇಗೆ ಅರಸಿ ಬರುತ್ತಾಳೆ?

೩. ತಾಯಿ ತನ್ನ ಮಗುವನ್ನು ಏನೆಂದು ಹರಸುತ್ತಾಳೆ?

**ಇ) ಕವಿತೆಯ ಈ ಸಾಲುಗಳ ಅರ್ಥ ಹೇಳಿರಿ.**

೧. ಊಟೆಯಂದದಿ ನೆಗೆ ನೆಗೆದು ಬರುವೆ.

೨. ಮಹಾತ್ಮನಿರಲಿ ಮಂಕನಿರಲಿ, ಜಗದೊಡೆಯನಾಗಲೆಂದು ಹರಸುವ ಮಾತೆ.

೩. ಗುರಿ ಮರೆತ ಬಾಳಿಗೆ ನೀ ದಿಕ್ಸೂಚಿ.



## III. ಭಾಷಾಭ್ಯಾಸ :

**ಅ) 'ಅ' ಪಟ್ಟಿಗೆ 'ಬ' ಪಟ್ಟಿಯನ್ನು ಹೊಂದಿಸಿ ಬರೆಯಿರಿ.**

| 'ಅ' ಪಟ್ಟಿ | 'ಬ' ಪಟ್ಟಿ | |
|---|---|---|
| ಅ) ನುಡಿ | ೧) ನೆಗೆ | ................................ |
| ಆ) ಅನುರಾಗ | ೨) ಆಕಾಶ | ................................ |
| ಇ) ಊಟೆ | ೩) ಮಾತು | ................................ |
| ಈ) ನಭ | ೪) ಪ್ರೀತಿ | ................................ |
| | ೫) ನೀರಿನ ಚಿಲುಮೆ | |

**ಆ) ಈ ಶಬ್ದಗಳನ್ನು ನಿಮ್ಮ ಸ್ವಂತ ವಾಕ್ಯದಲ್ಲಿ ಬಳಸಿ ಬರೆಯಿರಿ.**

೧. ಅನುರಾಗ :..................................................................................

೨. ನಭ :..................................................................................

೩. ಗುಟುಕಿಡು :..................................................................................

೪. ಮಹಾತ್ಮ :..................................................................................

೫. ದಿಕ್ಸೂಚಿ :..................................................................................

**ಇ) ಕೆಳಗೆ ಕೊಟ್ಟಿರುವ ಪದಗಳ ಉಚ್ಚಾರಣೆ ಹಾಗೂ ಅರ್ಥ ವ್ಯತ್ಯಾಸ ತಿಳಿಯಿರಿ.**

೧. ಅರಸು – ಹರಸು ______________ ______________

೨. ಹಾಡು – ಆಡು ______________ ______________

೩. ನಡೆ – ನುಡಿ ______________ ______________

೪. ನಗೆ – ನೆಗೆ ______________ ______________

೫. ಸಿರಿ – ಸೆರೆ ______________ ______________

೬. ಮರೆ – ಮೊರೆ ______________ ______________



**ಈ) ಈ ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

೧. ರಾಗ x ______________

೨. ಕರುಣೆ x ______________

೩. ಒಡೆಯ x ______________

೪. ಮೊದಲ x ______________

**ಉ) ಈ ಜೋಡುನುಡಿಗಳನ್ನು ಗಮನಿಸಿ ವಾಕ್ಯದ ಮುಖಾಂತರ ಅರ್ಥ ತಿಳಿಯಿರಿ.**

೧. **ತಪ್ಪು ನೆಪ್ಪು** : ನನ್ನ ತಪ್ಪು ನೆಪ್ಪುಗಳನ್ನು ಅಮ್ಮ ಕ್ಷಮಿಸುವಳು.

೨. **ಅಡೆತಡೆ** : ಅಡೆತಡೆ ಬಂದರೂ ಓದು ಮುಂದುವರೆಸುವೆನು.

೩. **ಸುಳ್ಳು ಪೊಳ್ಳು** : ನಾನು ಸುಳ್ಳು ಪೊಳ್ಳು ಹೇಳುವುದಿಲ್ಲ.

೪. **ಹಾಲುಜೇನು** : ಬದುಕು ಹಾಲುಜೇನಿನಂತೆ ಇರಬೇಕು.

## ಪೂರಕ ಓದು :

ಒಬ್ಬ ವಿಧವೆ. ಸಣ್ಣ ತರಕಾರಿ ಅಂಗಡಿ. ಅದರಿಂದಲೇ ಆಕೆಯ ಜೀವನ ಸಾಗುತ್ತಿತ್ತು. ಅವಳಿಗೆ ಒಬ್ಬನೇ ಮಗ. ಅವನನ್ನು ಓದಿಸಬೇಕೆಂಬ ಹಂಬಲ. ದೊಡ್ಡ ಶಾಲೆಗೆ ಸೇರಿಸಿದ್ದಳು. ಅವನ ಸಹಪಾಠಿಗಳು ಶ್ರೀಮಂತರ ಮಕ್ಕಳು. ತಾಯಿ ಮಗನ ವಿದ್ಯಾಭ್ಯಾಸದ ಬಗ್ಗೆ ತಿಳಿಯಲು ಶಾಲೆಗೆ ಬಂದಳು. ಹರಕಲು ಸೀರೆ, ಬಡಕಲು ಶರೀರದ ಆಕೆಯನ್ನು ನೋಡಿದ ಸಹಪಾಠಿಗಳು ಗೇಲಿ ಮಾಡಿದರು. ಇದರಿಂದ ಅವನಿಗೆ ಅವಮಾನವಾದಂತಾಯಿತು. ಸಾಯಂಕಾಲ ಮನೆಗೆ ಬಂದು ತಾಯಿಯನ್ನು ತರಾಟೆಗೆ ತೆಗೆದುಕೊಂಡನು. ಇನ್ನೊಮ್ಮೆ ಶಾಲೆಯ ಹತ್ತಿರ ಬಾರದಂತೆ ತಾಕೀತು ಮಾಡಿದ.

ದಿನಗಳು ಉರುಳಿದವು. ಮಗ ದೊಡ್ಡವನಾದನು. ಚೆನ್ನಾಗಿ ಓದಿದ. ಹೊರದೇಶಕ್ಕೆ ಹೋದ. ತಾಯಿಯನ್ನು ಮರೆತೇ ಬಿಟ್ಟನು. ಅವನು ಭಾರತಕ್ಕೆ ಬಂದಾಗ ತಾಯಿಯ ಮನೆ ನೆನಪಾಯಿತು. ಊರಿಗೆ ಬಂದ. ತಾಯಿ ಸತ್ತ ಸುದ್ದಿ ತಿಳಿಯಿತು. ಮರುಗಿದ. ಸಾಯುವ ಮುನ್ನ ಒಂದು ಪತ್ರ ಬರೆಸಿ ಮಗ ಬಂದರೆ ಕೊಡಲು ಮನೆಯ ಮಾಲೀಕನಿಗೆ ತಿಳಿಸಿದ್ದಳು. ಅದನ್ನು ಬಿಡಿಸಿ ನೋಡಿದಾಗ "ಮಗು ನೀನು ಚಿಕ್ಕವನಿದ್ದಾಗ ನಡೆದ ಅಪಘಾತದಲ್ಲಿ ಒಂದು ಕಣ್ಣನ್ನು ಕಳೆದುಕೊಂಡಿದ್ದೆ. ಎಲ್ಲರೂ ನಿನ್ನನ್ನು ಕುರುಡ ಎಂದು ಕರೆಯಬಾರದೆಂದು ವೈದ್ಯರಲ್ಲಿಗೆ ಹೋದೆನು. ನನ್ನ ಕಣ್ಣನ್ನು ತೆಗೆದು ನಿನಗೆ ಹಾಕಲು ಹೇಳಿದೆ, ಅವರು ಆಗುವುದಿಲ್ಲ ಎಂದರು. ಆಗ ಸತ್ತ ನಂತರ ದಾನ ಮಾಡಿದ್ದ ಬೇರೊಬ್ಬರ ಕಣ್ಣನ್ನು ನಿನಗೆ ಕಸಿ ಮಾಡಿದರು. ಚಿಕಿತ್ಸೆಗೆ ಕೊಡಬೇಕಾದ ಹಣಕ್ಕಾಗಿ ನಾನು ಕೊನೆ ಉಸಿರು ಇರುವವರೆಗೆ ದುಡಿದು ತೀರಿಸಿದ್ದೇನೆ. ನೀನು ಎಲ್ಲಿಯೇ ಇರು ಚೆನ್ನಾಗಿರು. ಇದೆ ನನ್ನ ಹರಕೆ ಪತ್ರ."

ಇದನ್ನು ಓದಿ ಅವನ ಕಣ್ಣಲ್ಲಿ ನೀರು ಬಂದಿತು. ಇಂತಹ ತಾಯಿಯನ್ನು ಸರಿಯಾಗಿ ನೋಡಿಕೊಳ್ಳಲಿಲ್ಲ. ಎಂದು ದುಃಖಿಸಿದನು.



**ನಿಮ್ಮ ತಾಯಿಯ ಬಗೆಗೆ ನಿಮ್ಮ ಅನಿಸಿಕೆಗಳನ್ನು ಬರೆಯಿರಿ.**

______________________________

______________________________

______________________________

______________________________

______________________________



## ಗದ್ಯ ಪಾಠ – ೧೦

# ಧೀರಬಾಲಕ ನರೇಂದ್ರ








ಒಬ್ಬ ಬಾಲಕ ಕಣ್ಮುಚ್ಚಿ ಚಿಂತನೆ ಮಾಡುತ್ತಿದ್ದ. ಮೈ ಮೇಲೆ ಪರಿವೆಯಿರಲಿಲ್ಲ. ಅವನ ಮೇಲೆ ಹಾವೊಂದು ಹರಿದು ಹೋಯಿತು. ಅವನ ಗೆಳೆಯರು ನೋಡಿದರು. ಗಾಬರಿಯಾಗಿ ಓಡಿದರು. ತುಸು ಸಮಯದ ನಂತರ ಹುಡುಗರು ಓಡಿ ಬಂದರು. ಅವನನ್ನು ಮುಟ್ಟಿ ಎಚ್ಚರಿಸಿದರು. ಹಾವು ಹರಿದಾಡಿದ ವಿಷಯ ತಿಳಿಸಿದರು. ಹುಡುಗ ಭಯಪಡಲಿಲ್ಲ. ಅವನು "ಪ್ರಾಣಿಗಳ ತಂಟೆಗೆ ಹೋಗದಿದ್ದರೆ ಅವು ನಮ್ಮನ್ನು ಏನೂ ಮಾಡುವುದಿಲ್ಲ" ಎಂದನು.

ಈ ಹುಡುಗನ ಮನೆಯ ಬಳಿ ಒಂದು ದೊಡ್ಡ ತೋಟವಿತ್ತು. ಅಲ್ಲಿ ಮಾವಿನ ಮರವಿತ್ತು. ಅವನು ಮತ್ತು ಅವನ ಗೆಳೆಯರು ಆ ಮರವನ್ನು ಹತ್ತುತ್ತಿದ್ದರು. ಕೊಂಬೆಯಿಂದ ಕೊಂಬೆಗೆ ಹಾರುತ್ತಾ, ಕೂಗುತ್ತಾ ಆಟವಾಡುತ್ತಿದ್ದರು. ಇದರಿಂದ ಮಾಲಿಗೆ ಬೇಸರವಾಯಿತು. ಅವನು "ಆ ಮರದಲ್ಲಿ ಭೂತ ಇದೆ. ನೀವು ಈಗಲೇ ಜಾಗ ಬಿಟ್ಟು ಹೋಗಿ, ಇಲ್ಲದಿದ್ದರೆ ನಿಮ್ಮನ್ನೆಲ್ಲ ನುಂಗಿಬಿಡುತ್ತದೆ" ಎಂದನು. ಈ ಮಾತನ್ನು ಕೇಳಿದ ಬಾಲಕರು ಹೆದರಿ ಓಡಿಹೋದರು. ಈ ಹುಡುಗ ಮಾತ್ರ ಅಲ್ಲಿಯೇ ಇದ್ದ. ಭಯದ ಬದಲು ಭೂತದ ಬಗ್ಗೆ ಅವನಿಗೆ ಕುತೂಹಲ.

ಕೊಂಬೆಯಿಂದ ಕೊಂಬೆಗೆ ತೂಗಾಡುತ್ತಾ ಭೂತವನ್ನು ಎದುರಿಸಲು ಸಿದ್ಧನಾದನು. ಭೂತ ಬರಲೇ ಇಲ್ಲ. ಕಾದು ಕಾದು ನಿರಾಶನಾದ. ಇದು ಹುಡುಗರನ್ನು ಓಡಿಸಲು ಉಪಾಯ ಎಂದು ಅರಿತನು. ಕೂಡಲೇ ಗೆಳೆಯರನ್ನು ಕರೆದನು. ಇಂತಹ ಭಯದ ಮಾತುಗಳನ್ನು ನಂಬಬಾರದೆಂದು ತಿಳಿ ಹೇಳಿದನು. ಇವನಾರು ಗೊತ್ತೆ? ಇವನೇ ನರೇಂದ್ರ.

ಇವರು ದೊಡ್ಡವರಾದ ಮೇಲೆ ರಾಮಕೃಷ್ಣ ಪರಮಹಂಸರ ಶಿಷ್ಯರಾದರು. ಸ್ವಾಮಿ ವಿವೇಕಾನಂದ ಎಂದು ಅವರು ಹೆಸರಿಸಿದರು. ಇವರೊಮ್ಮೆ ಅಮೇರಿಕಾಗೆ ಹೋಗಿದ್ದರು. ಅಲ್ಲಿ ಡಾಯರ್‌ಸನ್ ಎಂಬುವವರ ಮನೆಯಲ್ಲಿ ಅತಿಥಿಯಾಗಿ ಉಳಿದುಕೊಂಡರು. ಅವರ ಮನೆಯಲ್ಲಿ ಪುಸ್ತಕ ಓದುತ್ತಾ ಕುಳಿತಾಗ ಡಾಯರ್‌ಸನ್ ಬಂದರು. ವಿವೇಕಾನಂದರು ಓದಿನ ಗುಂಗಿನಲ್ಲಿ ಇವರನ್ನು ಗಮನಿಸಲಿಲ್ಲ. ಮುಂದೆ ವಿವೇಕಾನಂದರು ಅವರೊಡನೆ ಮಾತನಾಡಲು ಆರಂಭಿಸಿದರು. ಪುಸ್ತಕದ ನೂರಾರು ಸಾಲುಗಳನ್ನು ಅದರಂತೆ ಉದಾಹರಿಸುತ್ತಿದ್ದರು. ಇದನ್ನು ಕಂಡು ಡಾಯರ್‌ಸನ್ ಬೆರಗಾದರು. "ಇದು ಹೇಗೆ ಸಾಧ್ಯ?" ಎಂದರು. "ಇದೆಲ್ಲ ಓದುವಾಗಿನ ಏಕಾಗ್ರತೆಯಿಂದ ಸಾಧ್ಯ. ಆ ಸಮಯದಲ್ಲಿ ಉರಿಯುವ ಕೆಂಡವನ್ನು ನನ್ನ ಮೇಲೆ ಇಟ್ಟರೂ ಗೊತ್ತಾಗುವುದಿಲ್ಲ" ಎಂದರು.

ಭಾರತಕ್ಕೆ ಬಂದಮೇಲೆ ಇವರು ದೇಶದ ತುಂಬ ಸುತ್ತಿದರು. ಜನರ ಕಷ್ಟ ಅರಿತರು. 'ಏಳಿ ಎದ್ದೇಳಿ! ಎಚ್ಚರಗೊಳ್ಳಿರಿ! ಗುರಿ ಮುಟ್ಟುವವರೆಗೆ ನಿಲ್ಲದಿರಿ', 'ಶಕ್ತಿಯೇ ಜೀವನ; ದೌರ್ಬಲ್ಯವೇ ಮರಣ' ಎಂದು ಕರೆ ನೀಡಿದರು.

* * * *



## ಅಭ್ಯಾಸ

### I. ಪದಗಳ ಅರ್ಥ :

**ಅರಿ** – ತಿಳಿ
**ಏಕಾಗ್ರತೆ** – ತದೇಕಚಿತ್ತತೆ.
**ಕುತೂಹಲ** – ತವಕ; ತಿಳಿದುಕೊಳ್ಳುವ ಆಸಕ್ತಿ.
**ಗುಂಗು** – ತಲ್ಲೀನತೆ; ಮುಳುಗುವಿಕೆ.
**ತಂಟೆ** – ಗೋಜು; ಉಪದ್ರವ.
**ಪರಿವೆ** – ಅರಿವು
**ಮಾಲಿ** – ತೋಟ ಕಾಯುವವನು.
**ಉಪಾಯ** – ಯುಕ್ತಿ
**ಕೆಂಡ** – ಉರಿಯುತ್ತಿರುವ ಇದ್ದಿಲು.
**ಗಮನಿಸು** – ಲಕ್ಷಿಸು
**ಚಿಂತನೆ** – ಯೋಚನೆ; ಧ್ಯಾನ.
**ದೌರ್ಬಲ್ಯ** – ಬಲಹೀನವಾದ.
**ಬೆರಗು** – ಆಶ್ಚರ್ಯಪಡು
**ಸಿದ್ಧ** – ಸಮರ್ಥ

## II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಬಾಲಕ ನರೇಂದ್ರನ ಮೇಲೆ ಏನು ಹರಿದು ಹೋಯಿತು?

೨. ನರೇಂದ್ರ ತೋಟದಲ್ಲಿ ಯಾರಿಗಾಗಿ ಕಾದನು?

೩. ರಾಮಕೃಷ್ಣ ಪರಮಹಂಸರು ನರೇಂದ್ರನನ್ನು ಯಾವ ಹೆಸರಿನಿಂದ ಕರೆದರು?

೪. ಸ್ವಾಮಿ ವಿವೇಕಾನಂದರು ಜನರಿಗೆ ಕೊಟ್ಟ ಸಂದೇಶವೇನು?

೫. ಸ್ವಾಮಿ ವಿವೇಕಾನಂದರು ಜನರ ಕಷ್ಟ ಹೇಗೆ ಅರಿತರು?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಬಾಲಕ ನರೇಂದ್ರನ ಮೇಲೆ ಹಾವು ಹರಿದ ಪ್ರಸಂಗ ಯಾವುದು?

೨. ತೋಟದ ಮಾಲಿಗೆ ಮಕ್ಕಳಿಂದ ಯಾವ ತೊಂದರೆ ಆಗುತ್ತಿತ್ತು?

೩. ತೋಟದ ಮಾಲಿ ಮಕ್ಕಳಿಗೆ ಏನೆಂದು ಹೇಳಿದನು?

೪. ಡಾಯರ್‌ಸನ್‌ನು ಏಕೆ ಬೆರಗಾದನು?

೫. ಸ್ವಾಮಿ ವಿವೇಕಾನಂದರು ಡಾಯರ್‌ಸನ್‌ಗೆ ಏನೆಂದು ಉತ್ತರಿಸಿದರು?

೬. ಪ್ರಾಣಿಗಳ ಬಗ್ಗೆ ನರೇಂದ್ರನ ಅಭಿಪ್ರಾಯವೇನು?

೭. ಭೂತದ ಬಗೆಗೆ ನರೇಂದ್ರನ ವಿಚಾರಗಳೇನು?

೮. ಏಕಾಗ್ರತೆ ಎಂದರೇನು?



**ಇ) ಕೆಳಗಿನ ವಾಕ್ಯಗಳನ್ನು ಯಾರು ಯಾರಿಗೆ ಹೇಳಿದರು? ತಿಳಿಸಿರಿ.**

೧. "ಪ್ರಾಣಿಗಳ ತಂಟೆಗೆ ಹೋಗದಿದ್ದರೆ ಅವು ನಮ್ಮನ್ನು ಏನೂ ಮಾಡುವುದಿಲ್ಲ."

೨. "ಭಯದ ಮಾತುಗಳನ್ನು ನಂಬಬಾರದು."

೩. "ಇದು ಹೇಗೆ ಸಾಧ್ಯ?"

೪. "ಶಕ್ತಿಯೇ ಜೀವನ; ದೌರ್ಬಲ್ಯವೇ ಮರಣ."

## III. ಭಾಷಾಭ್ಯಾಸ :

### ಅ) ಕೆಳಗಿನ ಪದಗಳನ್ನು ಸ್ವಂತವಾಕ್ಯದಲ್ಲಿ ಬಳಸಿ ಬರೆಯಿರಿ.

೧. ಸಿದ್ಧನಾಗು : ..............................................................................

೨. ಏಕಾಗ್ರತೆ : ..............................................................................

೩. ಕಣ್ಮುಚ್ಚಿ : ..............................................................................

೪. ಕುತೂಹಲ : ..............................................................................

೫. ಉಪಾಯ : ..............................................................................

### ಆ) ಬಿಟ್ಟ ಸ್ಥಳಗಳನ್ನು ನೀಡಿರುವ ನಾಲ್ಕು ಆಯ್ಕೆಯ ಉತ್ತರಗಳಿಂದ ಸರಿಯಾದುದನ್ನು ಆರಿಸಿ ಬರೆಯಿರಿ.

೧. ನರೇಂದ್ರನು ......................... ಮಾಡುತ್ತಿದ್ದಾಗ ಮೈಮೇಲೆ ಹಾವು ಹರಿದಾಡಿತು.

ಅ) ಧ್ಯಾನ ಬ) ಊಟ
ಕ) ಸ್ನಾನ ಡ) ನಿದ್ದೆ

೨. ನರೇಂದ್ರನಿಗೆ ಭೂತದ ಬಗೆಗೆ ......................... ಇತ್ತು.

ಅ) ಅಂಜಿಕೆ ಬ) ಕುತೂಹಲ
ಕ) ಗೌರವ ಡ) ಭಯ

೩. ನರೇಂದ್ರನು ನಾನು .................. ಉರಿವ ಕೆಂಡವನ್ನು ನನ್ನ ಮೇಲಿಟ್ಟರೂ ಗೊತ್ತಾಗುವುದಿಲ್ಲ ಎಂದನು.

ಅ) ಓದುವಾಗ ಬ) ಬರೆಯುವಾಗ
ಕ) ಮಾತಾಡುವಾಗ ಡ) ಕೇಳುವಾಗ

೪. ಶಕ್ತಿಯೇ ಜೀವನ; ದೌರ್ಬಲ್ಯವೇ .........................

ಅ) ಜನನ ಬ) ನಿಶ್ಶಕ್ತಿ

ಕ) ಮರಣ ಡ) ಮುಕ್ತಿ

ಇ) ಈ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.

**ಮಾದರಿ : ಭಯ x ಅಭಯ**

೧. ಕಷ್ಟ x ........................

೨. ಜನನ x ........................

೩. ಕೀರ್ತಿ x ........................

೪. ಆಸೆ x ........................

ಈ) ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.

**ಮಾದರಿ :** ಕಣ್ಮುಚ್ಚೆ = ಕಣ್ಣು + ಮುಚ್ಚೆ

೧. ಹಾವೊಂದು = ........................

೨. ನರೇಂದ್ರ = ........................

೩. ನೂರಾರು = ........................

೪. ಹೀಗೆಂದರು = ........................

ಉ) ಕೆಳಗೆ ನೀಡಿರುವ ಪದಗಳಲ್ಲಿ ವ್ಯಾಕರಣ ಶುದ್ಧ ಪದವನ್ನು ಸರಿ ಚಿಹ್ನೆಯಿಂದ ಗುರುತಿಸಿರಿ.

೧. ಹಾವು – ಆವು

೨. ಓಡು – ಹೋಡು

೩. ಹುಡುಗ – ಉಡುಗ

೪. ಬಾರಥ – ಭಾರತ

೫. ಅಥಿತಿ – ಅತಿಥಿ

## ಪೂರಕ ಓದು :

(ಈ ಹಾಡನ್ನು ಎಲ್ಲರೂ ಕೂಡಿ ಹಾಡಿರಿ ಹಾಗೂ ಪ್ರಸ್ತುತ ಗದ್ಯದಲ್ಲಿನ ವಿಚಾರಗಳೊಂದಿಗೆ ಇರುವ ಸಾಮ್ಯತೆಯನ್ನು ಗಮನಿಸಿರಿ.)

### ಸ್ವಾಮಿ ವಿವೇಕಾನಂದ

ಭುವನೇಶ್ವರಿ ಕರುಣೆಯ ಕಂದ
ವಿಶ್ವನಾಥದತ್ತರ ಪುತ್ರನು ಅಂದ
ಪರಮಹಂಸರ ಶಿಷ್ಯನು ನರೇಂದ್ರ
ಭಾರತ ಮಾತೆಗೆ ಕೀರುತಿ ತಂದ
ಚಿಕಾಗೋ ಸಭೆಯಲ್ಲಿ ಭಾಗವಹಿಸಿದ
ಸರ್ವಧರ್ಮಗಳ ಸಮನ್ವಯ ಸಾರಿದ
ಮಾನವೀಯ ಪ್ರೀತಿಯ ಎತ್ತಿ ಹಿಡಿದ
ಲೋಕಕ್ಕೆ ಬೆಳಕಾದ ಹೆಮ್ಮೆಯ ಕಂದ
ಏಳಿರಿ, ಎದ್ದೇಳಿರಿ ಎಂದು ಧ್ವನಿಸಿದ
ಯುವ ಜನಾಂಗಕ್ಕೆ ಸ್ಫೂರ್ತಿ ತುಂಬಿದ
ನವಭಾರತ ಕಟ್ಟಲು ಕಹಳೆ ಊದಿದ
ಭಾರತಾಂಬೆಯ ವೀರ ವಿವೇಕಾನಂದ

– ಎಂ.ಜೆ. ದೇಶಪಾಂಡೆ



. ಈ ಕೆಳಗಿನ ಪ್ರಶ್ನೆಗೆ ನಿಮ್ಮದೇ ಮಾತುಗಳಲ್ಲಿ ಬರೆಯಿರಿ.

ಬಾಲಕ ನರೇಂದ್ರನ ಜೀವನದಿಂದ ಕಲಿಯಬೇಕಾದ ವಿಚಾರಗಳೇನು?

________________________________________

________________________________________

________________________________________

________________________________________



# ಪದ್ಯ ಪಾಠ – ೧೧




## ಉದಯ ರಾಗ

– ಪಂಜೆ ಮಂಗೇಶರಾಯ





ಮೂಡುವನು ರವಿ ಮೂಡುವನು
ಕತ್ತಲೊಡನೆ ಜಗಳಾಡುವನು
ಮೂಡಣ ರಂಗಸ್ಥಳದಲಿ ನೆತ್ತರು
ಮಾಡುವನು ಕುಣಿದಾಡುವನು.

ಬಂಗಾರದ ಚೆಲು ಬಿಸಿಲ ಕಿರೀಟದ
ಶೃಂಗಾರದ ತಲೆ ಎತ್ತುವನು,
ತೆಂಗಿನ ಕಂಗಿನ ತಾಳೆಯ ಬಾಳೆಯ
ಅಂಗಕೆ ರಂಗನು ಮೆತ್ತುವನು.

ಮಾಡಿನ ಹುಲ್ಲಲಿ ಚಿನ್ನದ ಗೆರೆಯನು
ಎಳೆಯುವನು, ರವಿ ಎಳೆಯವನು;
ಕೂಡಲ ಕೋಣೆಯ ಕತ್ತಲೆ ಕೊಳೆಯನು
ತೊಳೆಯುವನು, ರವಿ ಹೊಳೆಯುವನು.

ಏರುವನು ರವಿ ಏರುವನು
ಬಾನೊಳು ಸಣ್ಣಗೆ ತೋರುವನು
ಏರಿದವನು ಚಿಕ್ಕವನಿರಬೇಕೆಲೆ
ಎಂಬಾ ಮಾತನು ಸಾರುವನು.

## ಕೃತಿಕಾರರ ಪರಿಚಯ :



**ಪಂಜೆ ಮಂಗೇಶರಾಯರು** ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲೂಕಿನ ಪಂಜೆ ಗ್ರಾಮದವರು. ಇವರು ೨೪ ನೇ ಫೆಬ್ರವರಿ ೧೮೭೪ ರಲ್ಲಿ ಜನಿಸಿದರು. ಇವರು ಕನ್ನಡ ಸಾಹಿತ್ಯದ ನವೋದಯ ಕಾಲದ ಕವಿಗಳು, ಹಾಗೆಯೇ ಶ್ರೇಷ್ಠ ಶಿಕ್ಷಕರು ಆಗಿದ್ದರು. ಇವರು 'ಹುತ್ತರಿ ಹಾಡು', 'ತೆಂಕಣ ಗಾಳಿಯಾಟ', 'ನಾಗರಹಾವು', 'ಕೊಕ್ಕೊಕೊ ಕೋಳಿ', 'ಗುಡುಗುಡು ಗುಮ್ಮಟದೇವ', 'ಕೋಟಿ ಚನ್ನಯ್ಯ', 'ಇಲಿಗಳ ಥಕ ಥೈ' ಇತ್ಯಾದಿ ಮಕ್ಕಳ ಸಾಹಿತ್ಯ ರಚಿಸಿದ್ದಾರೆ.

ಇವರು ೧೯೩೪ ರಲ್ಲಿ ರಾಯಚೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಇವರು ೧೯೩೭ ಅಕ್ಟೋಬರ್ ೨೫ ರಂದು ದೈವಾಧೀನರಾದರು.



ಕವಿ ಇಲ್ಲಿ ಸೂರ್ಯೋದಯದ ಸೊಬಗನ್ನು ವರ್ಣಿಸಿದ್ದಾರೆ. ಬೆಳಕು ಕತ್ತಲನ್ನು ಹೊಡೆದೋಡಿಸುವ ಸಂದರ್ಭವನ್ನು ಕತ್ತಲೊಡನೆ ರವಿ ಜಗಳಾಡುವನು ಎಂದು ವರ್ಣಿಸಿದ್ದಾರೆ. ಸೂರ್ಯ ಬಂಗಾರದ ಬಣ್ಣದ ಕಿರೀಟ ಧರಿಸಿ ಉದಯಿಸಿದಾಗ ಅವನ ಕಿರಣಗಳ ಸುಂದರತೆಯನ್ನು ಬಣ್ಣಿಸಿದ್ದಾರೆ. ರವಿ ಕತ್ತಲನ್ನು ಕಳೆದಂತೆ ಜ್ಞಾನ ಮಾನವನ ಮನದ ಕತ್ತಲನ್ನು ತೊಳೆಯುತ್ತದೆ. ಉನ್ನತ ಸ್ಥಾನಕ್ಕೇರಿದ ವ್ಯಕ್ತಿ, ಅಹಂಕಾರವನ್ನು ಹೊಂದಿರಬಾರದು ಎನ್ನುವ ಸಂದೇಶವನ್ನು ನೀಡಿದ್ದಾರೆ.

## ಅಭ್ಯಾಸ

### I. ಪದಗಳ ಅರ್ಥ :

**ಅಂಗ** – ದೇಹದ ಭಾಗ.

**ಕಂಗು** – ಅಡಿಕೆ

**ಕೂಡಲ ಕೋಣೆ** – ಪಡಸಾಲೆ; ಮೊಗಸಾಲೆ.

**ಚಿನ್ನದ** – ಬಂಗಾರದ

**ಬಾನು** – ಆಕಾಶ

**ಮೂಡಣ** – ಪೂರ್ವ ದಿಕ್ಕು

**ರಂಗಸ್ಥಳ** – ನಾಟಕ ಪ್ರದರ್ಶನ ಸ್ಥಳ.

**ಶೃಂಗಾರ** – ನವರಸಗಳಲ್ಲಿ ಒಂದು.

**ಎಳೆಯವ** – ಚಿಕ್ಕವ; ಸಣ್ಣವ.

**ಕಿರೀಟ** – ಮುಕುಟ

**ಕೊಳೆ** – ಹೊಲಸು; ಕಸ.

**ನೆತ್ತರು** – ರಕ್ತ

**ಮಾಡಿನ** – ಛಾವಣಿಯ; ಉಪ್ಪರಿಗೆಯ.

**ಮೆತ್ತು** – ಹಚ್ಚು; ಬಳಿ.

**ರಂಗು** – ಬಣ್ಣ

**ಸಾರು** – ಹೇಳು



### II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ರವಿ ಮೂಡುವಾಗ ಯಾರೊಡನೆ ಜಗಳಾಡುವನು?

೨. ರವಿ ಎಲ್ಲಿ ಕುಣಿದಾಡುವನು?

೩. ರವಿ ಏನನ್ನು ತೊಟ್ಟು ಶೃಂಗಾರದ ತಲೆ ಎತ್ತುವನು?

೪. ರವಿ ಯಾವು ಯಾವುದಕ್ಕೆ ರಂಗನು ಮೆತ್ತುವನು?

೫. ಚಿನ್ನದ ಗೆರೆಯನು ಎಳೆಯುವ ರವಿ ಹೇಗಿರುತ್ತಾನೆ?

೬. ರವಿ ಬಾನೊಳು ಸಣ್ಣಗೆ ಕಾಣುವುದು ಯಾವಾಗ?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯದಲ್ಲಿ ಉತ್ತರಿಸಿರಿ.**

೧. ಮೂಡಣ ದಿಕ್ಕಿನಲ್ಲಿ ರವಿ ಉದಯಿಸುವುದನ್ನು ಕವಿ ಹೇಗೆ ವರ್ಣಿಸಿದ್ದಾರೆ?

೨. ಸೂರ್ಯನ ಕಿರಣಗಳ ರಂಗನ್ನು ಕವಿ ಹೇಗೆ ವರ್ಣಿಸಿದ್ದಾರೆ?

೩. ಎಳೆಯ ರವಿ ಕೂಡಲ ಕೋಣೆಯಲ್ಲಿ ಮಾಡುವ ಕೆಲಸವೇನು?

೪. ಮೇಲಕೇರಿದ ರವಿ ನೀಡುವ ಸಂದೇಶವೇನು?

**ಇ) ಬಿಟ್ಟ ಸ್ಥಳಗಳನ್ನು ನೀಡಿರುವ ನಾಲ್ಕು ಆಯ್ಕೆಯ ಉತ್ತರಗಳಿಂದ ಸರಿಯಾದ ಪದವನ್ನು ಆರಿಸಿ ತುಂಬಿರಿ.**

೧. ರವಿ ಕತ್ತಲೊಡನೆ ..................

ಅ) ಕುಣಿದಾಡುವನು   ಬ) ನಡೆದಾಡುವನು

ಕ) ಮೆರೆದಾಡುವನು   ಡ) ಜಗಳಾಡುವನು

೨. ರವಿ .................. ರಂಗಸ್ಥಳದಲಿ ನೆತ್ತರು ಮಾಡುವನು.

ಅ) ಮೂಡಣ   ಬ) ಪಡುವಣ

ಕ) ತೆಂಕಣ   ಡ) ಬಡಗಣ

೩. 'ತೆಂಗಿನ ಕಂಗಿನ' ಈ ಪದಗಳ ಅರ್ಥ ..................

ಅ) ತೆಂಗು–ಅಡಿಕೆ   ಬ) ತೆಂಗು–ಬಾಳೆ

ಕ) ತೆಂಗು–ಕಾಯಿ   ಡ) ತೆಂಗು–ಮಾವು

೪. ರವಿ, ಏರಿದವನು .................. ಇರಬೇಕು ಎಂಬ ಮಾತನು ಸಾರುವನು.

ಅ) ದೊಡ್ಡವ   ಬ) ಗಟ್ಟಿಗ

ಕ) ಮೆತ್ತಗೆ   ಡ) ಚಿಕ್ಕವ

೫. ಬಾನೊಳು ಏರಿದ ರವಿ .................. ತೋರುವನು.

ಅ) ಸಣ್ಣಗೆ   ಬ) ಬೆಳ್ಳಗೆ

ಕ) ನುಣ್ಣಗೆ   ಡ) ತಣ್ಣಗೆ

**ಈ) 'ಅ' ಪಟ್ಟಿಗೆ 'ಬ' ಪಟ್ಟಿಯನ್ನು ಹೊಂದಿಸಿ ಬರೆಯಿರಿ.**

| 'ಅ' ಪಟ್ಟಿ | 'ಬ' ಪಟ್ಟಿ | |
|---|---|---|
| ಅ) ಕತ್ತಲೊಡನೆ | ೧) ಸಣ್ಣಗೆ ತೋರುವನು | .............................. |
| ಆ) ಶೃಂಗಾರದ | ೨) ಎಳೆಯುವನು | .............................. |
| ಇ) ಅಂಗಕೆ | ೩) ಜಗಳಾಡುವನು | .............................. |
| ಈ) ಚಿನ್ನದ ಗೆರೆಯನು | ೪) ರಂಗನು ಮೆತ್ತುವನು | .............................. |
| ಉ) ಬಾನೊಳು | ೫) ತಲೆ ಎತ್ತುವನು | .............................. |

## III. ಭಾಷಾಭ್ಯಾಸ :

ಅ) ಈ ಪದಗಳನ್ನು ನಿಮ್ಮ ಸ್ವಂತ ವಾಕ್ಯದಲ್ಲಿ ಬರೆಯಿರಿ.

೧. ಮೂಡಣ : ...............................................................................

೨. ಕುಣಿದಾಡು : ...............................................................................

೩. ಮೆತ್ತು : ...............................................................................

೪. ಏರು : ...............................................................................

೫. ಸಾರು : ...............................................................................

ಆ) ಈ ಪದಗಳಿಗೆ ಶಬ್ದಕೋಶ ನೋಡಿ ಸಮಾನಾರ್ಥಕ ಪದಗಳನ್ನು ಬರೆಯಿರಿ.

೧. ರವಿ .................... ....................

೨. ಮೂಡಣ .................... ....................

೩. ಕಿರೀಟ .................... ....................

೪. ನೆತ್ತರು .................... ....................

೫. ಬಾನು .................... ....................

ಇ) 'ಉದಯರಾಗ' ಕವಿತೆಯಲ್ಲಿ ಬರುವ ಪ್ರಾಸ ಪದಗಳನ್ನು ಹುಡುಕಿ ಬರೆಯಿರಿ.

**ಮಾದರಿ :** ರವಿ – ಕವಿ

................. – .................

................. – .................

................. – .................

................. – .................

ಈ) ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.

**ಮಾದರಿ :** ಕತ್ತಲೊಡನೆ = ಕತ್ತಲು + ಒಡನೆ

೧. ಜಗಳವಾಡು = .................... + ....................

೨. ಕುಣಿದಾಡು = .................... + ....................

೩. ಚಿಕ್ಕವನಿರಬೇಕು = .................... + ....................

**ಉ) ಮಾದರಿಯಂತೆ ಸಂಬಂಧಪಡದ ಪದವನ್ನು ಹೊರತೆಗೆದು ಬರೆಯಿರಿ.**

**ಮಾದರಿ :** ಸಾರು, ಹೇಳು, ಕೇಳು, ನುಡಿ. (ಕೇಳು)

೧. ಸೂರ್ಯ, ರವಿ, ಚಂದ್ರ, ದಿನಕರ. (..................)

೨. ಕಿರೀಟ, ಹಾರ, ರುಮಾಲು, ಮುಕುಟ. (..................)

೩. ಬೆಳ್ಳಿ, ಬಂಗಾರ, ಚಿನ್ನ, ಸ್ವರ್ಣ. (..................)

೪. ಆಕಾಶ, ಮೋಡ, ಬಾನು, ನಭ. (..................)

**ಊ) ಕೆಳಗಿನ ಪದಗಳಲ್ಲಿನ ಅರ್ಥ ವ್ಯತ್ಯಾಸವನ್ನು ತಿಳಿಯಿರಿ.**

೧. ಮೂಡಣ – ಮೂಡುವ ........................ ........................

೨. ಎಳೆಯುವ – ಎಳೆಯವ ........................ ........................

೩. ಬಂಗಾರ – ಶೃಂಗಾರ ........................ ........................

೪. ತೊಳೆ – ಹೊಳೆ ........................ ........................



## ಪೂರಕ ಓದು

ಮುಂಗೋಳಿ ಕೂಗ್ಯಾವು ಮೂಡು ಕೆಂಪೇರ್ಯಾವು
ಸ್ವಾಮಿ ನನ್ನಯ್ಯ ರಥವೇರಿ । ಬರುವಾಗ
ನಾವೆದ್ದು ಕೈಯ ಮುಗಿದೇವು ॥

ಸೂರ್ಯೋದಯದ ವರ್ಣ ವೈಭವಕ್ಕೆ ಮಾರುಹೋಗದ ಕವಿಗಳೇ ಇಲ್ಲ. ಕನ್ನಡದ ಎಲ್ಲಾ ಕವಿಗಳು ಒಂದಿಲ್ಲೊಂದು ಸಮಯದಲ್ಲಿ ಸೂರ್ಯೋದಯವನ್ನು ಅನುಭವಿಸಿದವರೇ, ಬರೆದವರೇ! ಅಂತೆಯೇ ಸೂರ್ಯಾಸ್ತವನ್ನು ಬಿಟ್ಟಿಲ್ಲ. ಸೂರ್ಯಾಸ್ತದ ಸಮಯದಲ್ಲಿ ದಿಗಂತ ಕೆಂಪಾಗಿರುತ್ತದೆ. ಕವಿ ಕಲ್ಪನೆಯಲ್ಲಿ ಅದಕ್ಕೆ ಬೇರೆಯದೇ ಅರ್ಥಗಳಿರುತ್ತವೆ. 'ಎಲವೋ ಮಾನವ, ನಾನು ಕೊಟ್ಟ ಅಮೂಲ್ಯ ದಿನವನ್ನು ಸದುಪಯೋಗ ಮಾಡಿಕೊಳ್ಳದೆ ವ್ಯರ್ಥ ಕಾಲಹರಣ ಮಾಡಿದೆಯಲ್ಲ' ಎಂದು ರವಿ ಕೆಂಪಗೆ ಮುಖಮಾಡಿಕೊಂಡು ಕೋಪದಿಂದ ಪಡುವಣ ದಿಕ್ಕಿನಲ್ಲಿ ಅಸ್ತಂಗತನಾಗುತ್ತಾನೆ. ಆ ಕಾರಣದಿಂದ ಪಶ್ಚಿಮ ದಿಗಂತ ಕೆಂಪಾಗಿದೆ ಎಂದು ಕವಿ ವರ್ಣಿಸುವುದುಂಟು.



# ನರಿ–ದ್ರಾಕ್ಷಿ–ಟೊಮೇಟೋ




–ಎಂ. ಜಿ. ನಾಗರಾಜರಾವ್

ಒಂದು ದಿನ ಶಾಲೆಯಲ್ಲಿ ಗುರುಗಳು ರಾಮುವನ್ನು ಕೇಳಿದರು "ನಿನಗೆ 'ನರಿ–ದ್ರಾಕ್ಷಿ' ಕತೆ ಗೊತ್ತಾ?" ಎಂದು. ಅದಕ್ಕೆ ರಾಮು, "ಅದೇ, ಒಂದು ನರಿ, ಕೈಗೆಟುಕದ ದ್ರಾಕ್ಷಿಯನ್ನು ಹುಳಿ ಎಂದು ಹಿಯಾಳಿಸಿದ ಕತೆ ಅಲ್ಲವಾ?" ಉತ್ತರಿಸಿದ. ಗುರುಗಳು, "ಹೌದು, ಅದೇ ಕತೆ. ನೀನು ಹೇಗೆ ಹೇಳುತ್ತಿಯೋ ಹೇಳು" ಎಂದರು. ರಾಮು ಕತೆ ಹೇಳಲು ಪ್ರಾರಂಭಿಸಿದ.

ಹಸಿದಿದ್ದ ಒಂದು ನರಿ ಆಹಾರವನ್ನು ಹುಡುಕುತ್ತಾ ಒಂದು ತೋಟಕ್ಕೆ ಹೋಯಿತು. ಅಲ್ಲಿ ದ್ರಾಕ್ಷಿಯನ್ನು ಬೆಳೆದಿದ್ದರು. ದ್ರಾಕ್ಷಿ ಬಳ್ಳಿಗಳನ್ನು ಬಿದಿರುಗಳ ಹಂದರಗಳ ಮೇಲೆ ಹಬ್ಬಿಸಿದ್ದರು. ಬಳ್ಳಿಗಳಲ್ಲಿ ರಸವತ್ತಾದ ಬಿಳಿ ದ್ರಾಕ್ಷಿಗಳು ಗೊಂಚಲು ಗೊಂಚಲುಗಳಾಗಿ ನೇತು ಬಿದ್ದಿದ್ದವು.ಅವುಗಳನ್ನು ಕಂಡು ನರಿಯ ಬಾಯಲ್ಲಿ ನೀರೂರಿತು; ಅವನ್ನು ತಿನ್ನುವ ಬಯಕೆ ಮೂಡಿತು. ಆದರೆ ಯಾವ ಗೊಂಚಲೂ ಬಾಯಿಗೆ ಎಟುಕುತ್ತಿರಲಿಲ್ಲ. ನರಿ ನೆಗೆದು ನೆಗೆದು ಪ್ರಯತ್ನ ಪಟ್ಟಿತು. ಆದರೂ ಪ್ರಯೋಜನವಾಗಲಿಲ್ಲ. ಕೊನೆಯದಾಗಿ ದೂರದಿಂದ ಓಡಿಬಂದು ಹಾರುವ ಪ್ರಯತ್ನ ಮಾಡಿತು. ಅದೂ ವ್ಯರ್ಥವಾಯಿತು. ನರಿ ನಿರಾಸೆಯಿಂದ ಹೊರಕ್ಕೆ ಬಂತು. ಹೆಜ್ಜೆ ಹಾಕುತ್ತಾ ಹಾಕುತ್ತಾ ಅದು ಹೀಗೆ ಯೋಚಿಸಿತು. "ಈ ದ್ರಾಕ್ಷಿಗಳು ಹುಳಿ ಇರುತ್ತವೆ, ಇವನ್ನು ತಿಂದರೆ ನಾಲಿಗೆ ಕೆಡುತ್ತೆ, ಅಷ್ಟೆ. ಹೊಟ್ಟೆಯೊಳಕ್ಕೆ ಹೋದರೆ ರೋಗವೂ ಬರುತ್ತದೆ. ಈ ಹಣ್ಣುಗಳು ಕೈಗೆ ಎಟುಕದೆ ಹೋದದ್ದು ಒಳ್ಳೆಯದೇ ಆಯಿತು." ಆದರೆ ಆ ದ್ರಾಕ್ಷಿಗಳು ನಿಜಕ್ಕೂ ರುಚಿಕರವಾಗಿದ್ದವು. ಪುಷ್ಟಿಕರವಾಗಿದ್ದವು. ಈ ಕತೆಯನ್ನು ಕೇಳಿಯೇ "ಎಟುಕದ ದ್ರಾಕ್ಷಿ ಹುಳಿ" ಎಂಬ ಗಾದೆ ಹುಟ್ಟಿಕೊಂಡಿದೆ ಅನ್ನಿಸುತ್ತದೆ.



ಗುರುಗಳು ರಾಮುವಿನ ಬೆನ್ನು ತಟ್ಟಿ, "ಹೌದು, ಚೆನ್ನಾಗಿ ಹೇಳಿದೆ" ಎಂದು ಹೊಗಳಿದರು. ಆಗ ಇನ್ನೊಬ್ಬ ವಿದ್ಯಾರ್ಥಿನಿ ರೀಟ ಎದ್ದು ನಿಂತು ಕೇಳಿದಳು "ಗುರುಗಳೇ, ನರಿ ಹಸಿದಿತ್ತು ಎಂದು ಹೇಳಿದಿರಿ, ಆಮೇಲೆ ಹೊಟ್ಟೆಪಾಡಿಗೆ ಏನು ಮಾಡಿತು?"

ಗುರುಗಳು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುತ್ತಾ ನುಡಿದರು "ಎಲ್ಲರೂ ಯೋಚನೆ ಮಾಡಿರಿ. ಅದು ಏನು ಮಾಡಿರಬಹುದು? ಊಹಿಸಿ ಹೇಳಿರಿ." ಆಗ ರೀಟ ವಿಚಾರ ಮಾಡಿ ಹೇಳಿದಳು "ಆ ನರಿ ಹಸಿದಿತ್ತು. ಕಣ್ಣಿಗೆ ಕಾಣುವ ದ್ರಾಕ್ಷಿ ಎಟುಕಲಿಲ್ಲ. ಅಂದಮೇಲೆ ಅದು ಕೈಗೆ ಎಟುಕುವ ಹಣ್ಣನ್ನೇ ತಿಂದಿರಬೇಕು. ಅಂಥ ಹಣ್ಣು ಯಾವುದಿರಬಹುದು? ಯಾವುದಾದರೂ ಆಗಬಹುದು. ಹಾಂ! ಟೋಮೇಟೋ ಆಗಬಹುದು. ನರಿ ಮುಂದೆ ಹೋಯಿತು; ಅದಕ್ಕೆ ಟೋಮೇಟೋ ಗಿಡಗಳು ಕಾಣಿಸಿದವು. ಅವುಗಳಲ್ಲಿ ಎಲ್ಲೋ ಒಂದೊಂದು ಕಡೆ ಹಣ್ಣುಗಳಿದ್ದವು. ಕೆಲವು ಪೂರ್ತಿ ಹಣ್ಣಾಗಿದ್ದರೆ ಕೆಲವು ಅರ್ಧ ಹಣ್ಣು, ಮತ್ತೆ ಕೆಲವು ಕಾಯಿ, ಕಳಿತು ಕೊಳೆತ ಹಣ್ಣುಗಳೂ ಇದ್ದವು. ಅವು ನರಿಗೆ ಎಟುಕುತ್ತಿದ್ದವು. ನರಿ ಅವನ್ನು ಹೊಟ್ಟೆ ತುಂಬ ತಿಂದು ತೇಗಿತು. ಕೊಳೆತ ಹಣ್ಣನ್ನೂ ಬಿಡಲಿಲ್ಲ!"



ಗುರುಗಳು ಪ್ರಶ್ನಿಸಿದರು, "ಆಗ ನರಿ ಏನೆಂದುಕೊಂಡಿರಬಹುದು?"

ರಾಮು ಹೇಳಿದ, "ಆಗ ಅದು, ಈ ಹಣ್ಣುಗಳು ಅಮೃತ ಇದ್ದ ಹಾಗೆ ಇವೆ. ಇವು ಆರೋಗ್ಯಕ್ಕೂ ಒಳ್ಳೆಯವು ಎಂದುಕೊಂಡಿರಬಹುದು." ಗುರುಗಳು ಮೆಚ್ಚಿಕೊಳ್ಳುತ್ತಾ ಹೇಳಿದರು. "ಹೌದು, ನಿನ್ನ ಕಲ್ಪನೆ ತುಂಬ ಚೆನ್ನಾಗಿದೆ. ಕೈಗೆ ಸಿಕ್ಕಿದ್ದೇ ಒಳ್ಳೆಯದು, 'ಕನ್ನಡಿಯೊಳಗಿನ ಗಂಟಿಗಿಂತ, ಕೈಯೊಳಗಿನ ದಂಟೇ ಮೇಲು', 'ಪಾಲಿಗೆ ಬಂದದ್ದೇ ಪಂಚಾಮೃತ' ಎಂದು ಸ್ವೀಕರಿಸಿ ಅಷ್ಟರಲ್ಲಿಯೇ ತೃಪ್ತಿ ಪಡುವುದರಲ್ಲಿ ಜಾಣತನವಿದೆ ಎಂದು ಕತೆಯ ನೀತಿಯನ್ನು ನಿರೂಪಿಸಬಹುದು. ಕತೆಗಳನ್ನು ಹೊರನೋಟಕ್ಕೆ ಕಾಣುವಂತೆ ಮಾತ್ರ ಗ್ರಹಿಸಿದರೆ ಸಾಲದು.

ಅವುಗಳ ಹೂರಣವನ್ನು ಅಂದರೆ ಒಳಸತ್ಯವನ್ನು ಅರ್ಥಮಾಡಿಕೊಳ್ಳಬೇಕು. ಜೊತೆಗೆ ಕೇಳಿದ ಕತೆಯನ್ನು ವಿಸ್ತರಿಸುವ ಹಾಗೂ ಅಂಥವೇ ಕತೆಗಳನ್ನು ಕಟ್ಟುವ ಕಲ್ಪನಾಶಕ್ತಿಯನ್ನು ಬೆಳೆಸಿಕೊಳ್ಳಬೇಕು. ಅಂಥ ಶಕ್ತಿಯನ್ನು ಬೆಳೆಸಿಕೊಳ್ಳಿ. ನಿಮ್ಮ ಬುದ್ಧಿ ವಿಕಾಸಗೊಳ್ಳುತ್ತದೆ."

ರೀಟ ಎದ್ದು ನಿಂತು ಕೇಳಿದಳು. "ಗುರುಗಳೇ, ಈಗ ಹೇಳಿದ ಕತೆ ನಾವು ಕೇಳಿದ ಕತೆಯನ್ನು ವಿಸ್ತರಿಸಿದ ಹಾಗೆ ಆಯಿತಲ್ಲವೇ? ಇನ್ನು ಅಂಥದೇ ಕತೆಯನ್ನು ಕಟ್ಟುವ ರೀತಿಗೆ ಒಂದು ಉದಾಹರಣೆ ಕೊಡಿರಿ." ಆಗ ಗುರುಗಳು ಹೇಳಿದರು, "ನಮಗೆಲ್ಲ ಗೊತ್ತಿರುವ ಒಂದು ಕತೆ, ಅದು ಯಾವುದಾದರೂ ಆಗಬಹುದು ಹೇಳು."

ರೀಟ ಹೇಳಿದಳು, "ಆಮೆ–ಮೊಲದ ಕತೆ ಆಗಬಹುದು. ಮೊಲ ವೇಗವಾಗಿ ಓಡುವ ಪ್ರಾಣಿ. ಆಮೆ ನಿಧಾನವಾಗಿ ಚಲಿಸುವ ಪ್ರಾಣಿ. ಅವುಗಳ ನಡುವೆ ಓಟದ ಸ್ಪರ್ಧೆ ಏರ್ಪಟ್ಟಾಗ ಸಹಜವಾಗಿ ಮೊಲವೇ ಗೆಲ್ಲಬೇಕು. ಆದರೆ ಕತೆಯಲ್ಲಿ ಆಮೆ ಗೆಲ್ಲುತ್ತದೆ. ಅದೇ ವಿಶೇಷ. ನಾನು ಕಲ್ಪಿಸಿಕೊಂಡ ಕತೆ ಹೀಗಿದೆ. ಕಾಡಿನಲ್ಲಿ ವೇಗವಾಗಿ ಓಡುವ ಪ್ರಾಣಿ ಎಂದರೆ





ಜಿಂಕೆ, ನಿಧಾನವಾಗಿ ಚಲಿಸುವ ಪ್ರಾಣಿ ಎಂದರೆ ಆನೆ. ಆನೆಯ ನಡಿಗೆ ಮಂದ, ಗಜಗಮನ ಎನ್ನುತ್ತೇವಲ್ಲ! ಒಮ್ಮೆ ಅವುಗಳ ನಡುವೆ ಓಟದ ಸ್ಪರ್ಧೆ ನಡೆದರೆ ಹೇಗಿರಬಹುದು ಎನ್ನುವುದೇ ನನ್ನ ಕತೆ. ಒಂದು ಸಲ ಅವುಗಳಿಗೆ ಯಾವುದೋ ಕಾರಣಕ್ಕೆ ಓಟದ ಸ್ಪರ್ಧೆ ಏರ್ಪಟ್ಟಿತು ಎಂದು ಇಟ್ಟುಕೊಳ್ಳೋಣ. ಓಟದ ಸ್ಪರ್ಧೆ ಪ್ರಾರಂಭವಾಯಿತು. ಜಿಂಕೆ ಲೀಲಾಜಾಲವಾಗಿ ಓಡಿತು. ಮಾರ್ಗ ಮಧ್ಯೆ ಒಳ್ಳೆಯ ಹಸಿರು ಹುಲ್ಲು ಸೊಂಪಾಗಿ ಬೆಳೆದಿರುವುದನ್ನು ಕಂಡಿತು. ಹಸಿವಿಲ್ಲದಿದ್ದರೂ ಅದನ್ನು ಸವಿಯಬೇಕೆಂಬ ಚಪಲ ಹುಟ್ಟಿ ಅಲ್ಲಿಯೆ ನಿಂತು ಆನಂದವಾಗಿ ತಿನ್ನುವುದಕ್ಕೆ ತೊಡಗಿತು. ಆನೆ ಎಲ್ಲೋ ದೂರದಲ್ಲಿತ್ತು. ಜಿಂಕೆ ತಿನ್ನುವ ರಭಸದಲ್ಲಿ ತನ್ನ ಕೆಲಸವನ್ನೇ ಮರೆತುಬಿಟ್ಟಿತು. ಆನೆ ನಿಧಾನವಾಗಿಯಾದರೂ ತನ್ನ ಗುರಿಯತ್ತ ಸಾಗಿತು. ಮಾರ್ಗ ಮಧ್ಯೆ ಅದು ಸೊಂಪಾಗಿ ಬೆಳೆದ ಹುಲ್ಲನ್ನು ಕಂಡಿತು. ಅದಕ್ಕೆ ಹುಲ್ಲು ತಿನ್ನಬೇಕೆನಿಸಿದರೂ ಅದು ಚಪಲಕ್ಕೆ ಬಲಿಯಾಗಲಿಲ್ಲ. ಆನೆ ನಿಧಾನವಾಗಿ ನಡೆದರೂ ಗುರಿಯನ್ನು ಮುಟ್ಟಿಯೇ ಬಿಟ್ಟಿತು. ಜಿಂಕೆಗೆ ಸೋಲು, ಆನೆಗೆ ಗೆಲುವು!"

ಕತೆಯನ್ನು ಕೇಳಿ ಗುರುಗಳು ಸಂತೋಷಪಟ್ಟರು. ರೀಟಾಳ ಬೆನ್ನುತಟ್ಟಿ ಪ್ರೋತ್ಸಾಹಿಸಿದರು, "ರಾಮು ನೀನು ಈಗ ಇದರ ನೀತಿಯನ್ನು ಹೇಳುತ್ತೀಯಾ" ಎಂದು ಕೇಳಿದರು. ರಾಮು ಎದ್ದು ನಿಂತು ಹೇಳಿದ, "ನಾವು ಯಾವುದೇ ಕೆಲಸಕ್ಕೆ ತೊಡಗಿದಾಗ ನಮ್ಮ ಪೂರ್ಣ ಧ್ಯಾನ-ಧ್ಯಾಸ ನಮ್ಮ ಗುರಿಯನ್ನು ಸಾಧಿಸುವ ಕಡೆಗೇ ಇರಬೇಕು. ಬೇರೆ ಯಾವುದೇ ಆಕರ್ಷಣೆಗೆ ಒಳಗಾಗಬಾರದು." ಗುರುಗಳು "ಚೆನ್ನಾಗಿ ಹೇಳಿದೆ" ಎಂದರು. ವಿದ್ಯಾರ್ಥಿಗಳು ಚಪ್ಪಾಳೆ ತಟ್ಟಿದರು. ಒಬ್ಬ ವಿದ್ಯಾರ್ಥಿ ಹುಮ್ಮಸ್ಸಿನಿಂದ ಹೇಳಿದ, "ಗುರುಗಳೇ ನೀವು ದಿನಾ ಇಂಥ ಕತೆಗಳನ್ನು ಹೇಳಿ, ನಮಗೆ ತುಂಬಾ ಇಷ್ಟವಾಗುತ್ತೆ."

ಗುರುಗಳು ಸಂತೋಷದಿಂದ ನಗುತ್ತಾ ಹೇಳಿದರು, "ನಿಮಗೆ ಇಷ್ಟವಾಗುತ್ತದೆ ಅಂತ ಹೇಳಿದರೆ ನಾನು ಇಲ್ಲ ಎನ್ನುತ್ತೇನೆಯೇ? ಖಂಡಿತ ಹೇಳುತ್ತೇನೆ. ಪುಟ್ಟ ಪುಟ್ಟ ಕತೆಗಳನ್ನೂ ಹೇಳುತ್ತೇನೆ, ದೊಡ್ಡ ಕತೆಗಳನ್ನೂ ಹೇಳುತ್ತೇನೆ. ನೀವು ಆ ಕತೆಗಳನ್ನು ಕೇಳಿ ಅಥವಾ ಓದಿ ಸಂತೋಷ ಪಡುತ್ತೀರಿ. ಆದರೆ ಅಷ್ಟೇ ಸಾಲದು, ಅಂತಹ ಇನ್ನಿತರ ಸನ್ನಿವೇಶಗಳನ್ನು ಕಲ್ಪಿಸಿಕೊಂಡು ಕತೆಗಳನ್ನು ವಿಸ್ತರಿಸಿ, ಮಾರ್ಪಡಿಸಿ ಸಂತೋಷ ಪಡಬೇಕು. ಇಂತಹ ಕಲ್ಪನೆಗಳನ್ನು ಮಾಡಿಕೊಳ್ಳುವುದರಿಂದ ನಿಮ್ಮ ಮನಸ್ಸು ವಿಕಾಸಗೊಳ್ಳುತ್ತದೆ. ನೀವು ಹೆಚ್ಚು ಬುದ್ಧಿವಂತರಾಗುತ್ತೀರಿ, ವಿವೇಕಿಗಳಾಗುತ್ತೀರಿ, ಸಜ್ಜನರಾಗುತ್ತೀರಿ. ಕತೆಗಳ ಮೂಲಕ ನಿಮ್ಮ ಭಾಷೆಯೂ ಶುದ್ಧವಾಗುತ್ತದೆ ಮತ್ತು ನೀವು ಭಾಷೆಯ ಮೇಲೆ ಒಳ್ಳೆಯ ಹಿಡಿತವನ್ನೂ ಸಾಧಿಸುತ್ತೀರಿ. ಆ ವಿದ್ಯಾಗಣಪತಿಯು ನಿಮಗೆ ಬುದ್ಧಿ-ಸಿದ್ಧಿಗಳನ್ನು ಕರುಣಿಸಲಿ."

* * * *

## ಕೃತಿಕಾರರ ಪರಿಚಯ :



ಶ್ರೀ **ಎಂ. ಜಿ. ನಾಗರಾಜರಾವ್** ಅವರು ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಉಪಾಧ್ಯಾಯರು. ಇವರು ಮಕ್ಕಳ ಬುದ್ಧಿಗೆ ಚುರುಕು ಮನಸ್ಸಿಗೆ ಆನಂದ ನೀಡುವ ಹಲವಾರು ಕತೆಗಳನ್ನು ಬರೆದಿದ್ದಾರೆ. ಪ್ರಸ್ತುತ 'ನರಿ-ದ್ರಾಕ್ಷಿ-ಟೊಮೇಟೋ' ಕತೆಯನ್ನು ಅವರ 'ಚಿಕ್ಕ-ದೊಡ್ಡ ಕತೆಗಳು' ಪುಸ್ತಕದಿಂದ ಆರಿಸಲಾಗಿದೆ.

## ಅಭ್ಯಾಸ

### I. ಪದಗಳ ಅರ್ಥ :

**ಅಮೃತ** – ಹಾಲು

**ಗಜ** – ಆನೆ

**ಗ್ರಹಿಸು** – ಅರ್ಥಮಾಡಿಕೊ; ತಿಳಿದುಕೊ.

**ನೀರೂರು** – ಆಸೆ ಉಂಟಾಗು.

**ಪುಷ್ಟಿ** – ಶಕ್ತಿ; ಬೆಳವಣಿಗೆ.

**ಲೀಲಾಜಾಲ** – ಅತ್ಯಂತ ಸುಲಭವಾದುದು.

**ಸೊಂಪು** – ಸೊಗಸು; ಕಾಂತಿ.

**ಹೀಯಾಳಿಸು** – ನಿಂದಿಸು; ತೆಗಳು.

**ಹೊಟ್ಟೆಪಾಡು** – ಜೀವನೋಪಾಯ

**ಕೈಗೆಟುಕದ** – ಕೈಗೆ ಸಿಗದ

**ಗಜಗಮನ** – ನಿಧಾನವಾದ ನಡೆ

**ಧ್ಯಾಸ** – ನೆನಪು; ಜ್ಞಾಪನ; ಸ್ಮೃತಿ.

**ಪಂಚಾಮೃತ** – ಹಾಲು, ಮೊಸರು, ತುಪ್ಪ, ಜೇನುತುಪ್ಪ ಮತ್ತು ಸಕ್ಕರೆಗಳ ಮಿಶ್ರಣ.

**ವಿಕಾಸ** – ಅರಳು; ಪ್ರಕಟಗೊಳ್ಳು.

**ಹಂದರ** – ಚಪ್ಪರ

**ಹೂರಣ** – ಕಡುಬಿಗೆ ಸೇರಿಸುವ ಬೆಲ್ಲ ಕೊಬ್ಬರಿ ಮಿಶ್ರಣ.



### II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ರಾಮು ತರಗತಿಯಲ್ಲಿ ಹೇಳಿದ ಕತೆ ಯಾವುದು?

೨. ಹಸಿದಿದ್ದ ನರಿ ಆಹಾರ ಹುಡುಕುತ್ತ ಎಲ್ಲಿಗೆ ಬಂತು?

೩. ನರಿ ದ್ರಾಕ್ಷಿ ಹಣ್ಣನ್ನು ತಿನ್ನಲು ಹೇಗೆ ಪ್ರಯತ್ನಿಸಿತು?

೪. ನರಿ-ದ್ರಾಕ್ಷಿ ಕತೆಯಿಂದ ಹುಟ್ಟಿಕೊಂಡ ಗಾದೆ ಮಾತು ಯಾವುದು?

೫. ನರಿಗೆ ಎಟುಕಿದ ಟೊಮೇಟೋ ಹಣ್ಣುಗಳು ಹೇಗಿದ್ದವು?

೬. ಆಮೆ-ಮೊಲ ಓಟದ ಸ್ಪರ್ಧೆಯಲ್ಲಿ ಯಾವುದು ಗೆದ್ದಿತು?

೭. ರೀಟ ಆಮೆ ಮೊಲದ ಕತೆಯನ್ನು ಯಾವ ಪ್ರಾಣಿಗಳಿಗೆ ಹೋಲಿಸಿದಳು?
೮. ಆಮೆ ಮೊಲದ ಕತೆಯ ನೀತಿ ಏನು?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ದ್ರಾಕ್ಷಿ ಗೊಂಚಲು ಸಿಗದೆ ಇದ್ದಾಗ ನರಿಯು ಏನೆಂದುಕೊಂಡಿತು?
೨. ರೀಟ ನರಿ ದ್ರಾಕ್ಷಿ ಕತೆಯನ್ನು ಯಾವ ರೀತಿ ವಿಸ್ತರಿಸಿದಳು?
೩. ನರಿ ಟೊಮೇಟೋ ಕತೆಯ ನೀತಿ ಏನು?
೪. ಕತೆಗಳನ್ನು ಹೇಗೆ ಗ್ರಹಿಸಬೇಕೆಂದು ಗುರುಗಳು ಮಕ್ಕಳಿಗೆ ಹೇಳಿದರು?
೫. ಆಮೆ ಮೊಲದ ಕತೆಯ ಸಾರವೇನು?
೬. ರೀಟ ಹೇಳಿದ ಆನೆ ಜಿಂಕೆ ಕತೆಯ ವಿಶೇಷವೇನು?
೭. ಕತೆಗಳನ್ನು ವಿಸ್ತರಿಸಿ ಹೇಳುವುದರಿಂದ ಆಗುವ ಪ್ರಯೋಜನಗಳೇನು?

**ಇ) ಕೆಳಗಿನ ಮಾತುಗಳನ್ನು ಯಾರು ಯಾರಿಗೆ ಹೇಳಿದರು? ತಿಳಿಸಿರಿ.**

೧. ಈ ದ್ರಾಕ್ಷಿಗಳು ಹುಳಿ ಇರುತ್ತವೆ. ಇವನ್ನು ತಿಂದರೆ ನಾಲಗೆ ಕೆಡುತ್ತದೆ.
೨. ಎಲ್ಲರೂ ಯೋಚನೆ ಮಾಡಿರಿ. ಅದು ಏನು ಮಾಡಿರಬಹುದು?
೩. ನೀವು ಹೆಚ್ಚು ಬುದ್ಧಿವಂತರಾಗುತ್ತೀರಿ, ವಿವೇಕಿಗಳಾಗುತ್ತೀರಿ, ಸಜ್ಜನರಾಗುತ್ತೀರಿ.



## III. ಭಾಷಾಭ್ಯಾಸ :

**ಅ) ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

೧. ನಿರಾಸೆ x ________
೨. ಅಮೃತ x ________
೩. ತೃಪ್ತಿ x ________
೪. ಹೊರನೋಟ x ________
೫. ಪ್ರಯೋಜನ x ________
೬. ಸಜ್ಜನ x ________
೭. ವಿವೇಕಿ x ________

**ಆ) ಈ ಕೆಳಗಿನ ಗಾದೆ ಮಾತುಗಳನ್ನು ಪೂರ್ಣಗೊಳಿಸಿರಿ.**

೧. ಕನ್ನಡಿಯೊಳಗಿನ ಗಂಟಿಗಿಂತ, ............................. ದಂಟೇ ಮೇಲು.

೨. ಪಾಲಿಗೆ ಬಂದದ್ದೇ .................................

೩. ಎಟುಕದ ದ್ರಾಕ್ಷಿ .................................

**ಇ) ಈ ಪಾಠದಲ್ಲಿ ಬಳಕೆಯಾಗಿರುವ ದ್ವಿರುಕ್ತಿ ಪದಗಳನ್ನು ಹುಡುಕಿ ಬರೆಯಿರಿ.**

**ಮಾದರಿ :** ಗೊಂಚಲು ಗೊಂಚಲು

೧. .................................

೨. .................................

೩. .................................

**ಈ) ಕೆಳಗಿನ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿ ಬರೆಯಿರಿ.**

೧. ನೀರೂರು : ..........................................................................................

೨. ಪ್ರೋತ್ಸಾಹಿಸು : ..........................................................................................

೩. ಲೀಲಾಜಾಲ : ..........................................................................................

೪. ಕಲ್ಪನಾಶಕ್ತಿ : ..........................................................................................

೫. ಸಜ್ಜನ : ..........................................................................................

೬. ಆಕರ್ಷಣೆ : ..........................................................................................



**ಉ) ಕೆಳಗಿನ ಪದಗಳನ್ನು ಬಿಡಿಸಿ ಬರೆದಿದೆ ಅವುಗಳನ್ನು ಗಮನಿಸಿರಿ.**

| | | | | |
|---|---|---|---|---|
| ೧. ಕೈಗೆಟುಕು | = | ಕೈಗೆ | + | ಎಟುಕು |
| ೨. ಪಂಚಾಮೃತ | = | ಪಂಚ | + | ಅಮೃತ |
| ೩. ಕನ್ನಡಿಯೊಳಗಿನ | = | ಕನ್ನಡಿ | + | ಒಳಗಿನ |
| ೪. ವಿದ್ಯಾರ್ಥಿ | = | ವಿದ್ಯಾ | + | ಅರ್ಥಿ |
| ೫. ಸಜ್ಜನ | = | ಸತ್ | + | ಜನ |

## ಪೂರಕ ಓದು :

(ಈ ಹಾಡನ್ನು ಎಲ್ಲರೂ ಕೂಡಿ ಹಾಡಿ ನಲಿಯಿರಿ ಹಾಗೂ ಪ್ರಸ್ತುತ ಗದ್ಯದಲ್ಲಿನ ವಿಚಾರಗಳೊಂದಿಗೆ ಇರುವ ಸಾಮ್ಯತೆಯನ್ನು ಗಮನಿಸಿರಿ.)

### ಇಲಿಯ ಸಹಾಯ

ಒಂದಾನೊಂದು ಕಾಡಿತ್ತು
ಕಾಡಲಿ ಸಿಂಹ ಒಂದಿತ್ತು
ಮರದಡಿ ತಾನು ಮಲಗಿತ್ತು
ಮೈಮೇಲೆ ಇಲಿಯು ಕುಳಿತಿತ್ತು ॥ ೧ ॥

ಸಿಂಹಕೆ ಸಿಟ್ಟು ಬಂದಿತ್ತು
ಗಪ್ಪನೆ ಇಲಿಯ ಹಿಡಿದಿತ್ತು
ಕ್ಷಮಿಸು ಸಿಂಹ ಬಿಟ್ಟುಬಿಡು
ಮುಂದೆ ಸಹಾಯ ಮಾಡುವೆ
ದೈನ್ಯದಿ ಇಲಿಯು ಕೇಳಿತ್ತು ॥ ೨ ॥

ಗಹಗಹಿಸಿ ಸಿಂಹ ನಕ್ಕಿತ್ತು
ನಿನ್ನ ಸಹಾಯ ನನಗೆಂತು?
ಹೋಗಲೇ ಪುಟ್ಟ ಬದುಕಿಕೋ
ಜಂಭದಿ ಸಿಂಹ ಕಳಿಸಿತ್ತು ॥ ೩ ॥

ಮತ್ತೊಮ್ಮೆ ಸಿಂಹ ಮಲಗಿತ್ತು
ಬಲೆಯಲಿ ಅದು ಸಿಲುಕಿತ್ತು
ತಕ್ಷಣ ಇಲಿಯು ಬಂದಿತ್ತು
ಹಲ್ಲಲಿ ಬಲೆಯ ಕಡಿದಿತ್ತು ॥ ೪ ॥

ಬಲೆಯಿಂದ ಸಿಂಹವ ಬಿಡಿಸಿತ್ತು
ಸಿಂಹದ ಜಂಭ ಇಳಿದಿತ್ತು
ಹಿರಿದು-ಕಿರಿದು ಭೇದವು ಇಲ್ಲ
ಎಂಬ ಪಾಠವ ಕಲಿತಿತ್ತು. ॥ ೫ ॥



– ಗೀತಾ ಕೋಗಲೂರು

# ಪದ್ಯ ಪಾಠ – ೧೩

## ಜಾನಪದ






### ಮಗು

ಹಾಲ್ಬೇಡಿ ಅತ್ತಾನ, ಕೋಲ್ಬೇಡಿ ಕುಣಿದಾನ
ಮೊಸರ್ಬೇಡಿ ಕೆಸರ ತುಳಿದಾನ । ಕಂದಯ್ಯನ
ಕುಸುಲದ ಗೆಜ್ಜೆ ಕೆಸರಾಯ್ತು ॥



### ಚಂದ

ಹಾವಿನ ಹೆಡೆಚೆಂದ, ಮಾವಿನ ಮಿಡಿಚೆಂದ
ಹಾರಾಡಿ ಬರುವ ಗಿಳಿ ಚೆಂದ । ಕಂದಯ್ಯ
ನೀ ಚೆಂದ ನಮ್ಮ ಮನಿಗೆಲ್ಲ ॥

### ಹರಕೆ

ಎಲ್ಲಾದರೂ ಇರಲವ್ವ, ಹುಲ್ಲಾಗಿ ಬೆಳೆಯಲಿ
ನೆಲ್ಲಿ ಬಡ್ಡ್ಯಾಗಿ ಚಿಗಿಯಲಿ । ನನಕಂದ
ಜಯವಂತನಾಗಿ ಬೆಳೆಯಲಿ ॥



* * * *

## ಅಭ್ಯಾಸ

### I. ಪದಗಳ ಅರ್ಥ :

**ಕುಸುಲ** – ಸೂಕ್ಷ್ಮ ಕೆತ್ತನೆ; ಚಿತ್ತಾರ. **ಚಿಗಿಯಲಿ** – ಚಿಗುರಲಿ. **ಜಯ** – ಗೆಲುವು

**ಗಮನಿಸಿ–ತಿಳಿಯಿರಿ.**

**ನೆಲ್ಲಿಬಡ್ಡಿ** – ನೆಲ್ಲಿಮರದ ಕಾಂಡ ಕತ್ತರಿಸಿದಷ್ಟು ಅಗಲವಾಗಿ ಕವಲೊಡೆದು ಚಿಗುರುವುದು.

**ಹುಲ್ಲಾಗಿ ಬೆಳೆ** – ಜೋರಾದ ಗಾಳಿಗೂ, ಮಳೆಗೂ ಸಾಯದೆ ಯಾವಾಗಲೂ ಹಸಿರಾಗಿಯೇ ಇರುವುದು ಹುಲ್ಲು.

### II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಮಗು ಯಾವು ಯಾವುದಕ್ಕೆ ಹಟ ಮಾಡುತ್ತದೆ?

೨. ಮಗುವಿನ ಚಂದವನ್ನು ಜನಪದರು ಯಾವು ಯಾವುದಕ್ಕೆ ಹೋಲಿಸಿದ್ದಾರೆ?

೩. ಮಗುವಿನ ಗೆಜ್ಜೆ ಯಾವ ರೀತಿಯದು?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಮಗುವಿನ ಹಟದ ಬೇಡಿಕೆಗಳನ್ನು ಜನಪದರು ಯಾವ ರೀತಿ ವರ್ಣಿಸಿದ್ದಾರೆ?

೨. ತಾಯಿ ತನ್ನಕಂದ 'ನೆಲ್ಲಿ ಬಡ್ಡ್ಯಾಗಿ ಚಿಗಿಯಲಿ' ಎಂದು ಏಕೆ ಹಾರೈಸುತ್ತಾಳೆ?

೩. ಮಗುವಿನ ಗೆಜ್ಜೆ ಕೆಸರಾದರೂ ತಾಯಿ ಬೇಸರ ಪಡುವುದಿಲ್ಲ ಏಕೆ?

೪. ತಾಯಿ ತನ್ನ ಕಂದನನ್ನು ಯಾವ ರೀತಿ ಹಾರೈಸುತ್ತಾಳೆ?

### III. ಭಾಷಾಭ್ಯಾಸ :

**ಅ) ಹೊಸಗನ್ನಡ ರೂಪದಲ್ಲಿ ಬರೆದಿದೆ ಗಮನಿಸಿರಿ.**

| ಜಾನಪದ | ಹೊಸಗನ್ನಡ |
|---|---|
| ೧. ಅತ್ತಾನ | ಅಳುತ್ತಾನೆ |
| ೨. ಕುಣಿದಾನ | ಕುಣಿಯುತ್ತಾನೆ |

೩. ತುಳಿದಾನ ತುಳಿಯುತ್ತಾನೆ
೪. ಮನಿಗೆಲ್ಲ ಮನೆಯಲ್ಲೆಲ್ಲ
೫. ಬಡ್ಡ್ಯಾಗಿ ದೊಡ್ಡೆಯಾಗಿ
೬. ಇರಲವ್ವ ಇರಲಿ ಅವ್ವ
೭. ಚಿಗಿಯಲಿ ಚಿಗುರಲಿ

**ಆ) ಈ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆಯಿರಿ.**

೧. ಅಳು : ..................................................
೨. ಕುಣಿ : ..................................................
೩. ಕುಶಲ: ..................................................
೪. ಚೆಂದ: ..................................................
೫. ಚಿಗಿ : ..................................................

**ಇ) ಈ ಪದಗಳನ್ನು ಬಿಡಿಸಿ ಬರೆದಿದೆ. ಗಮನಿಸಿ ಓದಿರಿ.**

೧. ಹಾಲ್ಬೇಡಿ = ಹಾಲು + ಬೇಡಿ
೨. ಕೋಲ್ಬೇಡಿ = ಕೋಲು + ಬೇಡಿ
೩. ಮೊಸರ್ಬೇಡಿ = ಮೊಸರು + ಬೇಡಿ
೪. ಕೆಸರಾಯ್ತು = ಕೆಸರು + ಆಯ್ತು



**ಈ) ಮಾದರಿಯಂತೆ ಪದಗಳನ್ನು ರಚಿಸಿರಿ.**

**ಮಾದರಿ :** ಜಯವನ್ನು ಹೊಂದಿದವ = **ಜಯವಂತ**

೧. ಮಾನವನ್ನು ಹೊಂದಿದವ = ..................................................
೨. ಹಣವನ್ನು ಹೊಂದಿದವ = ..................................................
೩. ಗುಣವನ್ನು ಹೊಂದಿದವ = ..................................................
೪. ವಿದ್ಯೆಯನ್ನು ಹೊಂದಿದವ = ..................................................

ಉ) ಕೆಳಗಿನ ಪದ್ಯ ಭಾಗವನ್ನು ಪೂರ್ಣಗೊಳಿಸಿ, ಕಂಠಪಾಠ ಮಾಡಿರಿ.

ಎಲ್ಲಾದರೂ .................................

.................................................

.................................. ಬೆಳೆಯಲಿ.

## ಪೂರಕ ಓದು

**ಕರುಣಾಮಯಿ....**

ದೇವರು ಎಲ್ಲೆಡೆ ಸಿಗಲಾರದ ಕಾರಣ ತಾಯಿಯನ್ನು ಸೃಷ್ಟಿಸಿದ. ಪ್ರತಿ ಮಕ್ಕಳು ಅಮ್ಮನ ಬೆಚ್ಚನೆಯ ಮಡಿಲಲ್ಲಿ ವಾತ್ಸಲ್ಯವನ್ನು ಅನುಭವಿಸಿದವರೆ. ನಾವು ಎಷ್ಟೇ ದೊಡ್ಡವರಾಗಿ ಸ್ವತಂತ್ರ ಬದುಕು ಕಟ್ಟಿಕೊಂಡರೂ ಅಮ್ಮನ ಕೈತುತ್ತು, ತೋರಿದ ಪ್ರೀತಿ, ಕಲಿಸಿದ ಪಾಠ, ಹಾಕಿಕೊಟ್ಟ ಹಾದಿ ಎಲ್ಲವೂ ನಮಗೆ ದಾರಿದೀಪ. ಹೀಗಾಗಿ ವಯಸ್ಸಾದ ತಂದೆ ತಾಯಿಗಳನ್ನು ಪ್ರೀತಿಯಿಂದ ನೋಡಿಕೊಳ್ಳುವುದು ನಮ್ಮ ಆದ್ಯ ಕರ್ತವ್ಯ ಎಂಬುದನ್ನು ಮರೆಯಬಾರದು.

ಒಂದು ಊರಿನಲ್ಲಿ ಒಬ್ಬ ವಯಸ್ಸಾದ ತನ್ನ ತಾಯಿಯನ್ನು ಹೊತ್ತುಕೊಂಡು ಹೋಗುತ್ತಿರುತ್ತಾನೆ. ಆಕೆಗೆ ಗೊತ್ತು ಮಗ ತನ್ನನ್ನು ಅಡವಿಯಲ್ಲಿ ಒಂಟಿಯಾಗಿ ಬಿಟ್ಟು ಬರುತ್ತಾನೆಂದು. ಆದರೂ ಆಕೆ ಸಿಕ್ಕಿದ ಗಿಡಗಳ ಎಲೆಗಳನ್ನು ಕಿತ್ತು ಕಿತ್ತು ರಸ್ತೆಯುದ್ದಕ್ಕೂ ಹಾಕುತ್ತಲೇ ಬರುತ್ತಾಳೆ. ಮಗನಿಗೆ ಇದು ಅರ್ಥವಾಗಲಿಲ್ಲ. ಕೊನೆಗೆ ತಾಯಿಯನ್ನು ಕೇಳುತ್ತಾನೆ "ಏಕಮ್ಮ ದಾರಿಯುದ್ದಕ್ಕೂ ಎಲೆಗಳನ್ನು ಕಿತ್ತು ಕಿತ್ತು ಹಾಕುತ್ತಲೇ ಬರುತ್ತಿದ್ದೀಯ?" ಎಂದು. ಆಕೆ ಹೇಳುತ್ತಾಳೆ "ಮಗನೇ ಮತ್ತೆ ಇಲ್ಲಿಂದ ನೀನು ಹೋಗಬೇಕಾದರೆ ದಾರಿ ತಪ್ಪಿ ಎಲ್ಲೋ ಕಳೆದು ಹೋಗಬಾರದೆಂದು ಹಾಗೆ ಮಾಡಿದೆ" ಎನ್ನುತ್ತಾಳೆ.

ಮಗನಿಗೆ ತನ್ನ ತಪ್ಪಿನ ಅರಿವಾಗುತ್ತದೆ. ತಾಯಿಯನ್ನು ಮನೆಗೆ ಕರೆದುಕೊಂಡು ಬಂದು ಸಾಯುವ ತನಕ ಪ್ರೀತಿಯಿಂದ ಆರೈಕೆ ಮಾಡುತ್ತಾನೆ.



# ಗಾಂಧೀಜಿ ಜೀವನದ ನೈಜ ಸಂಗತಿಗಳು




– ಉಮಾಶಂಕರ ಜೋಷಿ

## ೧. ಬಾಪೂಜಿ ಅಂಗಿ ಏಕೆ ತೊಡುವುದಿಲ್ಲ?

ಬಾಪೂಜಿಯನ್ನು ಭೆಟ್ಟಿಯಾಗಲು ಅನೇಕ ಮಕ್ಕಳು ಆಗಾಗ ಬರುತ್ತಿದ್ದರು. ಒಂದು ದಿನ ಅಲ್ಲಿ ಬಂದ ಒಬ್ಬ ಬಾಲಕನಿಗೆ ಬಾಪೂಜಿಯ ವೇಷಭೂಷಣ ಕಂಡು ತುಂಬಾ ವ್ಯಸನವಾಯಿತು. ಇಷ್ಟೊಂದು ದೊಡ್ಡ ಬಾಪು, ಅವರ ಮೈಮೇಲೆ ಒಂದು ಅಂಗಿಯೂ ಇಲ್ಲವಲ್ಲ! ಅವನಿಂದ ತಡೆಯಲಾಗಲಿಲ್ಲ. ಕೇಳಿಯೇ ಬಿಟ್ಟ "ಬಾಪೂಜಿ, ತಾವು ಅಂಗಿ ಏಕೆ ತೊಡುವುದಿಲ್ಲ?"



ಬಾಪು ಹುಡುಗನನ್ನು ಮುದ್ದಿಸುತ್ತಾ ನುಡಿದರು "ಮಗೂ, ನನ್ನ ಹತ್ತಿರ ಹಣ ಎಲ್ಲಿದೆ? ನಾನು ತುಂಬಾ ಬಡವ. ಅಂಗಿಗಾಗಿ ಹಣ ಎಲ್ಲಿಂದ ತರಲಿ?"

ಹುಡುಗನ ಹೃದಯ ಕರಗಿ ನೀರಾಯಿತು. ಆತ ಹೇಳಿದ "ನನ್ನ ಅಮ್ಮನಿಗೆ ಹೊಲಿಗೆ ಬರುತ್ತದೆ. ನೋಡಿ! ಆಕೆಯೇ ನನ್ನ ಎಲ್ಲ ಅರಿವೆಗಳನ್ನು ಹೊಲಿಯುತ್ತಾಳೆ. ನಾನು ನನ್ನ ಅಮ್ಮನಿಗೆ ಹೇಳಿ ನಿಮಗಾಗಿ ಅಂಗಿ ಹೊಲಿಸಿ ಕೊಡುತ್ತೇನೆ. ಆಗ ನೀವು ಹಾಕಿಕೊಳ್ಳುವಿರಾ?"

"ನಿನ್ನ ಅಮ್ಮ ಎಷ್ಟು ಅಂಗಿ ಹೊಲಿಯಬಲ್ಲಳು?" ಬಾಪು ಕೇಳಿದರು

ಹುಡುಗ ನುಡಿದ "ನಿಮಗೆ ಎಷ್ಟು ಬೇಕು? ಒಂದು, ಎರಡು, ಮೂರು? ನೀವು ಕೇಳಿದಷ್ಟು ಹೊಲಿದು ಕೊಡುವಳು."

ಬಾಪು ವಿಚಾರ ಮಾಡುತ್ತಾ ನುಡಿದರು "ನಾನು ಒಬ್ಬನೇ ಇಲ್ಲ. ಒಬ್ಬನೇ ಅಂಗಿ ಹೇಗೆ ತೊಡಲಿ?"

ಬಾಲಕ ನುಡಿದ "ಎಷ್ಟು ಅಂಗಿ ತಂದರೆ ನಿಮ್ಮ ಕೆಲಸವಾಗಬಹುದು, ನಾನು ನನ್ನ ಅಮ್ಮನಿಂದ ಅಷ್ಟೇ ಅಂಗಿ ಹೊಲಿಸಿ ತರುವೆ. ಹೇಳಿರಿ ಬಾಪೂ, ಎಷ್ಟು ಅಂಗಿ ಬೇಕು ನಿಮಗೆ?"

ಹುಡುಗನ ಆಗ್ರಹ ಕಂಡು ಬಾಪು ನುಡಿದರು. "ಮಗೂ, ನನಗೆ ನಲವತ್ತು ಕೋಟಿ ಬಂಧು-ಭಗಿನಿಯರಿದ್ದಾರೆ. ಎಲ್ಲಿಯವರೆಗೆ ಎಲ್ಲರ ಮೈಮೇಲೆ ಅಂಗಿ ಇರುವುದಿಲ್ಲವೋ, ಅಲ್ಲಿಯವರಗೆ ನಾನೊಬ್ಬನೇ ಹೇಗೆ ಹಾಕಿಕೊಳ್ಳಲಿ? ನಿನ್ನ ಅಮ್ಮ ಎಲ್ಲರಿಗೂ ಹೊಲಿಯಬಲ್ಲಳೇ?"

ಇಷ್ಟು ನುಡಿದ ಬಾಪು ಹುಡುಗನನ್ನು ನೋಡತೊಡಗಿದರು. ಹುಡುಗ ವಿಚಾರದಲ್ಲಿ ಬಿದ್ದ. 40 ಕೋಟಿ ಬಂಧು-ಭಗಿನಿಯರು! ನಿಜ, ಬಾಪು ಸರಿಯಾಗಿಯೇ ಹೇಳುತ್ತಿದ್ದಾರೆ. ಎಲ್ಲಿಯವರೆಗೆ ಅವರೆಲ್ಲರಿಗೂ ಅಂಗಿ ಸಿಗುವುದಿಲ್ಲವೋ, ಬಾಪು ಒಬ್ಬರೇ ಹೇಗೆ ಹಾಕಿಕೊಳ್ಳುವರು?

## ೨. ಅರ್ಧಾಣೆ ಕೋಟಿ ರೂಪಾಯಿಗಳಿಗಿಂತ ಹೆಚ್ಚಿನದು.

ಚರಕ ಸಂಘದ ಸಹಾಯಾರ್ಥವಾಗಿ ಹಣ ಶೇಖರಿಸುತ್ತಾ ಗಾಂಧೀಜಿ ಹಳ್ಳಿ-ಪಟ್ಟಣಗಳಲ್ಲಿ ಯಾತ್ರೆ ಮಾಡುತ್ತಿದ್ದರು. ಒಂದು ಸಲ ಓರಿಸ್ಸಾದಲ್ಲಿ ಪ್ರವಾಸ ಮಾಡುತ್ತಿದ್ದಾಗ ಒಂದು ಸಭೆಯಲ್ಲಿ ಗಾಂಧೀಜಿ ಭಾಷಣ ಮಾಡುತ್ತಾ ಇದ್ದರು. ಭಾಷಣ ಮುಗಿದೊಡನೆ ಒಬ್ಬ ಬಡ ಮುದುಕಿ ಸಭೆಯಿಂದ ಎದ್ದು ಬಂದಳು. ಅವಳ ಕೂದಲೆಲ್ಲ ಬೆಳ್ಳಗಾಗಿತ್ತು. ಸೊಂಟ ಬಗ್ಗಿತ್ತು. ಚಿಂದಿ ಚಿಂದಿ ವಸ್ತ್ರ ತೊಟ್ಟಿದ್ದಳು. ಸ್ವಯಂ ಸೇವಕರು ಅವಳನ್ನು ಗಾಂಧೀಜಿಯವರ ಬಳಿ ಬರಲು ಬಿಡಲಿಲ್ಲ. ಆದರೂ ಅವಳು ಹೇಗೋ ಜಗಳ ಮಾಡಿ ಗಾಂಧೀಜಿಯವರ ಬಳಿ ತಲುಪಿದಳು.

"ದರ್ಶನ ಮಾಡಲು ಬಂದೆ" ಎನ್ನುತ್ತ ಆಕೆ ಬಾಪುವಿನ ಪಾದಗಳನ್ನು ಮುಟ್ಟಿ ಸೊಂಟದಿಂದ ಒಂದು ಅರ್ಧಾಣೆಯನ್ನು ಅವರ ಪಾದಗಳ ಬಳಿ ಇಟ್ಟು, ಹೊರಟು ಹೋದಳು. ಗಾಂಧೀಜಿ ಅದನ್ನು ತೆಗೆದುಕೊಂಡು ತಮ್ಮ ಬಳಿ ಇಟ್ಟುಕೊಂಡರು.

ಸೇಠ ಜಮನಾಲಾಲ ಬಜಾಜರು ಚರಕ ಸಂಘದ ಲೆಕ್ಕಪತ್ರ ಇಡುವವರಾಗಿದ್ದರು. ಲೆಕ್ಕದಲ್ಲಿ ಕೂಡಿಸಲು ಅವರು ಬಾಪುವಿನ ಹತ್ತಿರವಿದ್ದ ಅರ್ಧಾಣೆಯನ್ನು ಕೇಳಿದರು. ಆದರೆ ಕೊಡಲು ಬಾಪು ಒಪ್ಪಲಿಲ್ಲ.





ಜಮನಾಲಾಲರು ನಗುತ್ತಾ ನುಡಿದರು. "ಚರಕ ಸಂಘದ ಸಾವಿರಾರು ರೂಪಾಯಿಗಳ ಚೆಕ್ಕುಗಳನ್ನು ನಾನು ತೆಗೆದುಕೊಳ್ಳುತ್ತೇನೆ. ಈ ಅರ್ಧಾಣೆಗೆ ನಿಮಗೆ ನನ್ನಲ್ಲಿ ವಿಶ್ವಾಸವಿಲ್ಲವೇ?"

ಗಾಂಧೀಜಿ ನುಡಿದರು. "ಆ ಸಾವಿರಾರು ರೂಪಾಯಿಗಳಿಗಿಂತ ಈ ಅರ್ಧಾಣೆ ಬೆಲೆ ಹೆಚ್ಚಿನದು. ಲಕ್ಷಗಟ್ಟಲೆ ಹಣವಿದ್ದವ ಒಂದೆರಡು ಸಾವಿರ ಕೊಟ್ಟರೆ ಅದೇನೂ ಅಷ್ಟು ದೊಡ್ಡ ಮಾತಲ್ಲ. ಆದರೆ ಈ ಅರ್ಧಾಣೆ ಆ ಮುದುಕಿಯ ಇಡೀ ಜೀವಮಾನದ ಗಳಿಕೆಯೇ ಆಗಿರಬಹುದು. ಆಕೆ ತನ್ನ ಸರ್ವಸ್ವವನ್ನೇ ಕೊಟ್ಟಿದ್ದಾಳೆ. ಎಷ್ಟೊಂದು ಉದಾರ, ಎಷ್ಟೊಂದು ದೊಡ್ಡ ಮನಸ್ಸು ಅವಳದು! ಎಷ್ಟು ದೊಡ್ಡ ತ್ಯಾಗ ಮಾಡಿದ್ದಾಳೆ ಆಕೆ! ಅದಕ್ಕೆ ನನ್ನ ಹೃದಯದಲ್ಲಿ ಈ ಅರ್ಧಾಣೆ ಕೋಟಿ ರೂಪಾಯಿಗಳಿಗಿಂತ ಹೆಚ್ಚಿನ ಮೌಲ್ಯದ್ದಾಗಿದೆ."

* * * *

## ಕೃತಿಕಾರರ ಪರಿಚಯ :

'ಗಾಂಧೀಜಿ ಜೀವನದ ನೈಜ ಸಂಗತಿಗಳು' ಪಾಠವನ್ನು **ಉಮಾಶಂಕರ ಜೋಷಿ** ಅವರು ಬರೆದಿರುವ 'ಎಲ್ಲರ ಸಂಗಾತಿ ಎಲ್ಲರ ಮಿತ್ರ' ಪುಸ್ತಕದಿಂದ ಆರಿಸಲಾಗಿದೆ. ಈ ಪುಸ್ತಕವನ್ನು ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ ಪ್ರಕಟಿಸಿದೆ.

# ಅಭ್ಯಾಸ

## I. ಪದಗಳ ಅರ್ಥ :

**ಅರಿವೆ** – ಬಟ್ಟೆ
**ಆಣೆ** – ಒಂದು ನಾಣ್ಯ
**ಅರ್ಧಾಣೆ** – ಒಂದು ನಾಣ್ಯದ ಅರ್ಧ ಬೆಲೆ.
**ಆಗ್ರಹ** – ಬಲವಂತ; ಒತ್ತಾಯ.
**ಉದಾರ** – ಧಾರಾಳ
**ಗಳಿಕೆ** – ಸಂಪಾದನೆ; ಆದಾಯ.
**ಚೆಕ್ಕು** – ಬ್ಯಾಂಕ್ ಹುಂಡಿ ಚೀಟಿ.
**ಬಂಧು** – ನೆಂಟ; ಸಂಬಂಧಿಕ.
**ಭಗಿನಿ** – ಒಡಹುಟ್ಟಿದವಳು; ಸಹೋದರಿ.
**ಭೂಷಣ** – ಅಲಂಕಾರ
**ಮೌಲ್ಯ** – ಬೆಲೆ; ಕಿಮ್ಮತ್ತು.
**ವೇಷ** – ಉಡುಗೆ
**ವ್ಯಸನ** – ಚಿಂತೆ; ದುಃಖ.
**ಸರ್ವಸ್ವ** – ಸಮಸ್ತ ಸ್ವತ್ತು; ಸಮಸ್ತ ಆಸ್ತಿ.
**ಹೃದಯ ಕರಗಿ ನೀರಾಯಿತು** – ಕರುಣೆ; ಮರುಕ ಹುಟ್ಟಿತು.

## II. ಪ್ರಶ್ನೆಗಳು :

**ಅ) ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಬಾಪೂಜಿಯ ವೇಷಭೂಷಣ ಕಂಡು ಬಾಲಕನಿಗೆ ಏಕೆ ವ್ಯಸನವಾಯಿತು?
೨. ಬಾಲಕ ಬಾಪೂಜಿಯ ವೇಷ ಭೂಷಣ ಕಂಡು ಏನೆಂದು ಕೇಳಿದನು?
೩. ಬಾಪೂಜಿಯ ಮಾತುಗಳಿಂದ ಹುಡುಗನ ಹೃದಯ ಕರಗಿ ನೀರಾಯಿತು ಏಕೆ?
೪. ಹುಡುಗ ಬಾಪೂಜಿಗೆ ಯಾವ ರೀತಿ ಸಹಾಯ ಮಾಡುವುದಾಗಿ ಹೇಳಿದನು?
೫. ಗಾಂಧೀಜಿಯವರನ್ನು ಭೇಟಿ ಮಾಡಲು ಬಂದ ಮುದುಕಿ ಹೇಗಿದ್ದಳು?
೬. ಗಾಂಧೀಜಿ ಹಣವನ್ನು ಏಕೆ ಸಂಗ್ರಹಿಸುತ್ತಿದ್ದರು?
೭. ಗಾಂಧೀಜಿಯವರನ್ನು ಭೇಟಿಯಾದ ಮುದುಕಿ ಏನು ಮಾಡಿದಳು?
೮. ಚರಕ ಸಂಘದ ಲೆಕ್ಕಪತ್ರಗಳನ್ನು ಯಾರು ಇಡುತ್ತಿದ್ದರು?



**ಆ) ಈ ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಬಾಪೂಜಿ ಅಂಗಿ ತೊಡದಿರುವುದಕ್ಕೆ ಕಾರಣಗಳೇನು?
೨. ಮುದುಕಿ ನೀಡಿದ ಅರ್ಧಾಣೆ ಗಾಂಧೀಜಿಯವರಲ್ಲಿ ಯಾವ ಭಾವನೆಗಳನ್ನು ಮೂಡಿಸಿತು?

ಇ) ಈ ಕೆಳಗಿನ ವಾಕ್ಯಗಳನ್ನು ಯಾರು ಯಾರಿಗೆ ಹೇಳಿದರು? ತಿಳಿಸಿರಿ.

೧. ಮಗೂ ನನ್ನ ಹತ್ತಿರ ಹಣ ಎಲ್ಲಿದೆ? ನಾನು ತುಂಬಾ ಬಡವ.

೨. ಮಗೂ ನನಗೆ ನಲವತ್ತು ಕೋಟಿ ಬಂಧು ಭಗಿನಿಯರಿದ್ದಾರೆ.

೩. ಈ ಅರ್ಧಾಣೆಗೆ ನಿಮಗೆ ನನ್ನಲ್ಲಿ ವಿಶ್ವಾಸವಿಲ್ಲವೇ?

## III. ಭಾಷಾಭ್ಯಾಸ :

ಅ) ಕೆಳಗಿನ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆಯಿರಿ.

೧. ಸಹಾಯಾರ್ಥ : ..........

೨. ವಿಶ್ವಾಸ : ..........

೩. ಸರ್ವಸ್ವ : ..........

೪. ವೇಷಭೂಷಣ : ..........

೫. ಹೃದಯ ಕರಗಿತು : ..........

ಆ) ಈ ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.

೧. ಬಡವ x ..........

೨. ವಿಶ್ವಾಸ x ..........

೩. ಉದಾರ x ..........

೪. ವಿಚಾರ x ..........

ಇ) ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.

೧. ಅರ್ಧಾಣೆ = .......... + ..........

೨. ಸಹಾಯಾರ್ಥ = .......... + ..........

೩. ನಾನೊಬ್ಬ = .......... + ..........

೪. ಆಗಾಗ = .......... + ..........

೫. ಒಂದೆರಡು = .......... + ..........

ಈ) ಪ್ರಸ್ತುತ ಪಾಠದಲ್ಲಿ ಬಳಕೆಯಾಗಿರುವ ಈ ಲೇಖನ ಚಿಹ್ನೆಗಳನ್ನು ಬಳಸಿ ವಾಕ್ಯ ರಚಿಸಿರಿ.

೧. !

೨. ?

೩. "......"

೪. ,

೧. ..........................................................................................

೨. ..........................................................................................

೩. ..........................................................................................

೪. ..........................................................................................



## ಪೂರಕ ಓದು :

(ಈ ಹಾಡನ್ನು ಎಲ್ಲರೂ ಕೂಡಿ ಹಾಡಿ ನಲಿಯಿರಿ)

### ಅವರೇ ನಮ್ಮ ಗಾಂಧಿ

– ರೂಪ

ಬಲಗೈಯಲ್ಲಿ ಗೀತೆ
ಎಡಗೈಯಲ್ಲಿ ರಾಟೆ
ಹಿಡಿದವರ್‍ಯಾರು ಗೊತ್ತೆ
ಅವರೆ ನಮ್ಮ ಗಾಂಧಿ
ಶ್ರೀ ಮಹಾತ್ಮ ಗಾಂಧಿ ॥ ೧ ॥

ಕೈಯಲ್ಲೊಂದು ಕೋಲು
ಅವರಿಗಿಲ್ಲಾ ಸೋಲು
ಅಂತಹವರ್‍ಯಾರು ಗೊತ್ತೆ
ಅವರೇ ನಮ್ಮ ಗಾಂಧಿ
ಶ್ರೀ ಮಹಾತ್ಮ ಗಾಂಧಿ ॥ ೨ ॥

ಮಕ್ಕಳಿಗೆಲ್ಲಾ ತಾತಾ
ವಿಶ್ವಕ್ಕೆಲ್ಲಾ ಧಾತ
ಅಂತಹವರ್‍ಯಾರು ಗೊತ್ತೆ
ಅವರೇ ನಮ್ಮ ಗಾಂಧಿ
ಶ್ರೀ ಮಹಾತ್ಮ ಗಾಂಧಿ ॥ ೩ ॥



# ಶ್ರವಣಕುಮಾರ








ಕಾಡು, ಸುತ್ತಲೂ ಗಿಡಮರಬಳ್ಳಿ. ಅದರ ನಡುವೆ ಒಂದು ಪುಟ್ಟ ಕುಟೀರ. ಅಲ್ಲಿ ಶಾಂತನವ ಋಷಿ ತಮ್ಮ ಪತ್ನಿಯೊಂದಿಗೆ ವಾಸವಾಗಿದ್ದರು. ಅವರಿಗೆ ಒಬ್ಬನೇ ಮಗ. ಅವನ ಹೆಸರು ಶ್ರವಣಕುಮಾರ. ಅವರಿಗೆ ಮುಪ್ಪು ಆವರಿಸಿತ್ತು. ಪುಣ್ಯ ಕ್ಷೇತ್ರಗಳಿಗೆ ಹೋಗಬೇಕು, ತೀರ್ಥ ಸ್ನಾನ ಮಾಡಬೇಕು ಎಂದು ಅವರು ಚಡಪಡಿಸುತ್ತಿದ್ದರು. ಆದರೆ ಅವರಿಗೆ ಕಣ್ಣು ಕಾಣುತ್ತಿರಲಿಲ್ಲ.

ಶ್ರವಣಕುಮಾರನಿಗೆ ತಂದೆ–ತಾಯಿಗಳ ಮೇಲೆ ಅಪಾರ ಪ್ರೀತಿ. ಶ್ರವಣಕುಮಾರ ಅವರ ಆಸೆಯನ್ನು ಅರಿತನು. ಅವರಿಗೆ ಹೇಗಾದರೂ ಮಾಡಿ ತೀರ್ಥಯಾತ್ರೆ ಮಾಡಿಸಬೇಕೆಂದು ಯೋಚಿಸತೊಡಗಿದ. ಈ ಮುದುಕರನ್ನು ಕಾವಡಿಯಲ್ಲಿ ಕುಳ್ಳಿರಿಸಿ ಕರೆದೊಯ್ಯುವ ಉಪಾಯ ಹೊಳೆಯಿತು. ಉದ್ದನೆಯ ಗಟ್ಟಿ ಬಿದಿರು ತೆಗೆದುಕೊಂಡನು. ಎರಡು ಬದಿಯಲ್ಲಿ ತಕ್ಕಡಿಯಂತೆ ಬುಟ್ಟಿಗಳನ್ನು ಕಟ್ಟಿದ. ಅದೇ ಕಾವಡಿ. ಅದರಲ್ಲಿ ತಂದೆ–ತಾಯಿಗಳನ್ನು ಕೂಡಿಸಿದ. ಕಾವಡಿಯನ್ನು ಹೆಗಲ ಮೇಲೆ ಹೊತ್ತು ನಿಂತ. ಅವರ ಆಸೆ ಪೂರೈಸಲು ಹೊರಟೇ ಬಿಟ್ಟನು !

ಮಾರ್ಗ ಮಧ್ಯದಲ್ಲಿ ಅವರಿಗೆ ಹಣ್ಣುಗಳನ್ನು ತಂದುಕೊಡುತ್ತಿದ್ದ. ಬಾಯಾರಿದರೆ ನೀರನ್ನು ತರುತ್ತಿದ್ದ, ಆಯಾಸವರಿತು ವಿಶ್ರಮಿಸಲು ವ್ಯವಸ್ಥೆ ಮಾಡುತ್ತಿದ್ದನು. ಹೀಗೆ ತಂದೆ ತಾಯಿಯರನ್ನು ಹೊತ್ತು ನಡೆಯುತ್ತಲೇ ಇದ್ದ. ಅನೇಕ ಕಾಡು, ಗುಡ್ಡ, ನದಿಗಳನ್ನು ದಾಟುತ್ತ ಪುಣ್ಯ ಕ್ಷೇತ್ರಗಳಿಗೆ ಕರೆದೊಯ್ದನು. ಅವನ ಹೆತ್ತವರು ಇಂತಹ ಮಗನನ್ನು ಪಡೆದುದಕ್ಕೆ ಅಭಿಮಾನ ಪಡುತ್ತಿದ್ದರು.

ಒಂದು ದಿನ ದಟ್ಟ ಕಾಡಿನಲ್ಲಿ ನಡೆಯುತ್ತಿದ್ದನು. "ಮಗು , ಹತ್ತಿರದಲ್ಲಿ ಎಲ್ಲಿಯಾದರೂ ನೀರಿದೆಯಾ? ನೋಡು" ಎಂದು ತಂದೆ ಕೇಳಿದರು. ಶ್ರವಣಕುಮಾರ ಕಾವಡಿಯನ್ನು ಇಳಿಸಿದನು. ವಿಶ್ರಮಿಸಲು ಕೇಳಿಕೊಂಡನು. ಕೈಯಲ್ಲಿ ತತ್ರಾಣಿಯನ್ನು ಹಿಡಿದು ನೀರನ್ನು ಅರಸುತ್ತ ಹೊರಟನು. ದೂರದಲ್ಲಿ ಸರೋವರ ಕಾಣಿಸಿತು. ಅತ್ತ ಕಡೆಗೆ ದಾಪುಗಾಲು ಹಾಕಿದನು. ತತ್ರಾಣಿಯಲ್ಲಿ ನೀರು ತುಂಬಲು ಮುಂದಾದನು. ನೀರು "ಬುಳು ಬುಳು ಬುಳು" ಶಬ್ದ ಮಾಡುತ್ತ ತುಂಬ ತೊಡಗಿತು.

ಇತ್ತ ಅಯೋಧ್ಯೆಯ ಮಹಾರಾಜ ದಶರಥ ಕಾಡಿಗೆ ಬೇಟೆಗಾಗಿ ಬಂದಿದ್ದನು. ಪ್ರಶಾಂತ ಪರಿಸರದಲ್ಲಿ 'ಬುಳು ಬುಳು' ಶಬ್ದ ಕೇಳಿದ. ದಿಗ್ಗನೆ ಎದ್ದು ನಿಂತನು. ಯಾವುದೋ ಕಾಡುಪ್ರಾಣಿ ನೀರು ಕುಡಿಯುವ ಶಬ್ದವೆಂದು ಭಾವಿಸಿದನು. ಕೂಡಲೇ ಶಬ್ದವೇಧಿ ಬಾಣವನ್ನು ಬಿಟ್ಟನು. ತಕ್ಷಣವೇ 'ಅಯ್ಯೋ! ಅಮ್ಮಾ ! ನಾನು ಸತ್ತೆ' ಎನ್ನುವ ಚೀತ್ಕಾರ ಕೇಳಿ ಬಂತು. ಏನೋ ಅನರ್ಥವಾಯಿತು ಎಂದು ದಶರಥ ರಾಜನು ಗಾಬರಿಗೊಂಡನು. ಬಾಣ ಬಿಟ್ಟ ದಿಕ್ಕಿನ ಕಡೆಗೆ ಓಡಿದ. ಅಲ್ಲಿ ಮುನಿಕುಮಾರನೊಬ್ಬ ರಕ್ತದ ಮಡುವಿನಲ್ಲಿ ಬಿದ್ದು ವಿಲವಿಲನೆ ಒದ್ದಾಡುತ್ತಿದ್ದನು. ಬಾಣ ಮುನಿಕುಮಾರನ ಎದೆಯನ್ನು ಸೀಳಿತ್ತು. ಅದನ್ನು ಕಂಡು ರಾಜನಿಗೆ ದಿಕ್ಕೇ ತೋಚದಂತಾಯಿತು.

ಮಹಾರಾಜನು ಆ ಮುನಿಕುಮಾರನ ಬಳಿಗೆ ಓಡಿ ಬಂದನು. ತಾನು ಕಾಡು ಪ್ರಾಣಿ ಎಂದು ಭಾವಿಸಿ ಬಾಣ ಬಿಟ್ಟಿದ್ದು ತಪ್ಪಾಯಿತು. ಕ್ಷಮಿಸಬೇಕೆಂದು ಗೋಗರೆದ. ಆಗ ಶ್ರವಣಕುಮಾರ "ನನ್ನ ಮುಪ್ಪಿನ ತಂದೆ–ತಾಯಿಗಳಿಗೆ ಇನ್ನಾರು ಗತಿ? ಅವರ ತೀರ್ಥಯಾತ್ರೆಯನ್ನು ಇನ್ನಾರು ನಡೆಸಿಕೊಡುವರು? ಯಾವ ತಪ್ಪಿಗೆ ನನಗೀ ಶಿಕ್ಷೆ?" ಎಂದು ರೋಧಿಸಿದನು.

ದಶರಥನಿಗೆ ತನ್ನ ತಪ್ಪಿನ ಅರಿವಾಯಿತು. ತನ್ನಿಂದಾಗಿ ವಯಸ್ಸಾದ ಜೀವಿಗಳಿಗೆ ಕಷ್ಟ ಬಂತಲ್ಲ ಎಂದು ದುಃಖಿಸಿದನು. ಆಗ ಶ್ರವಣಕುಮಾರನು ದಶರಥ ಮಹಾರಾಜನನ್ನು ಸಮಾಧಾನ ಪಡಿಸಿ, ತನ್ನ ತಂದೆ ತಾಯಿಗಳ ಪರಿಸ್ಥಿತಿಯನ್ನು ವಿವರಿಸಿದನು. ಮಹಾರಾಜನು ಅವರ ಆಸೆಯನ್ನು ಪೂರೈಸುವುದಾಗಿ ಭರವಸೆ ನೀಡಿದನು. ತನ್ನ ಹೆತ್ತವರ ಆಸೆಯನ್ನು ಪೂರೈಸುವಂತೆ ಹೇಳುತ್ತಾ, ಆ ತರುಣ ಪ್ರಾಣ ಬಿಟ್ಟನು.

* * * *

## ಅಭ್ಯಾಸ

### I. ಪದಗಳ ಅರ್ಥ :

**ಅನರ್ಥ** – ಅರ್ಥವಲ್ಲದ; ಕೇಡು.
**ಕಾವಡಿ** – ಅಡ್ಡೆ; ಹೆಗಲಮೇಲೆ ಹೊತ್ತು ತರುವ ಬಿದಿರಿನ ದಬ್ಬೆ.
**ಕುಟೀರ** – ಗುಡಿಸಲು
**ಗಾಬರಿ** – ಹೆದರಿಕೆ; ಭಯ.
**ಗೋಗರೆ** – ದೈನ್ಯದಿಂದ ಬೇಡಿಕೊಳ್ಳು.
**ತತ್ರಾಣಿ** – ನೀರು ಕುಡಿಯಲು ಬಳಸುವ ಚಪ್ಪಟೆಯಾದ ಮಣ್ಣಿನ ಪಾತ್ರೆ.
**ತೀರ್ಥಯಾತ್ರೆ** – ಪುಣ್ಯಕ್ಷೇತ್ರಗಳಿಗೆ ಹೋಗಿಬರುವುದು.
**ದಾಪುಗಾಲು** – ದೊಡ್ಡ ಹೆಜ್ಜೆ.
**ಮಡು** – ನದಿ; ಹೊಳೆ.
**ರೋಧಿಸು** – ಅಳು; ಗೋಳಾಡು.
**ವೇಧಿ** – ತಿಳಿದವನು; ಜ್ಞಾನಿ.
**ಶಬ್ದವೇಧಿ** – ಶಬ್ದಗ್ರಹಣ ಮಾತ್ರದಿಂದ ಗುರಿಹಿಡಿದು ಬಾಣ ಪ್ರಯೋಗಿಸುವ ವಿದ್ಯೆ.



### II. ಪ್ರಶ್ನೆಗಳು :

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಶ್ರವಣಕುಮಾರನ ತಂದೆಯ ಹೆಸರು ಏನು?
೨. ಶ್ರವಣಕುಮಾರನ ತಂದೆತಾಯಿ ಮುಪ್ಪಿನ ಕಾಲದಲ್ಲಿ ಯಾವುದಕ್ಕೆ ಚಡಪಡಿಸಿದರು?
೩. ದಶರಥನು ಎಲ್ಲಿ ಯಾವ ನಗರದಲ್ಲಿ ನೆಲೆಸಿದ್ದನು?
೪. ದಶರಥನು ಶ್ರವಣಕುಮಾರನ ಬಳಿ ಏನೆಂದು ಗೋಗರೆದನು?
೫. ದಶರಥನು ಶ್ರವಣಕುಮಾರನಿಗೆ ಏನೆಂದು ಭರವಸೆ ನೀಡಿದನು?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಶ್ರವಣಕುಮಾರನು ತನ್ನ ತಂದೆ ತಾಯಿಗಳನ್ನು ತೀರ್ಥಯಾತ್ರೆಗೆ ಹೇಗೆ ಕರೆದೊಯ್ದನು?
೨. ತೀರ್ಥಯಾತ್ರೆಯ ಸಮಯದಲ್ಲಿ ಶ್ರವಣಕುಮಾರನು ತನ್ನ ತಂದೆ ತಾಯಿಗಳನ್ನು ಹೇಗೆ ಉಪಚರಿಸಿದನು?

೩. ಶ್ರವಣಕುಮಾರನು ದಶರಥನ ಬಳಿ ಏನೆಂದು ರೋಧಿಸಿದನು?

೪. ಶ್ರವಣಕುಮಾರನು ದಶರಥನ ಬಾಣಕ್ಕೆ ಹೇಗೆ ಬಲಿಯಾದನು?

**ಇ) ಕೆಳಗಿನ ಮಾತುಗಳನ್ನು ಯಾರು ಯಾರಿಗೆ ಹೇಳಿದರು? ತಿಳಿಸಿರಿ.**

೧. "ಮಗು, ಹತ್ತಿರದಲ್ಲಿ ಎಲ್ಲಿಯಾದರೂ ನೀರಿದೆಯಾ? ನೋಡು."

೨. "ಅಯ್ಯೋ! ಅಮ್ಮಾ! ನಾನು ಸತ್ತೆ"

೩. "ನನ್ನ ಮುಪ್ಪಿನ ತಂದೆ–ತಾಯಿಗಳಿಗೆ ಇನ್ನಾರು ಗತಿ?"

**ಈ) ಬಿಟ್ಟ ಸ್ಥಳಗಳನ್ನು ನೀಡಿರುವ ನಾಲ್ಕು ಆಯ್ಕೆಯ ಉತ್ತರಗಳಿಂದ ಸರಿಯಾದುದನ್ನು ಆರಿಸಿ ಬರೆಯಿರಿ.**

೧. ಶ್ರವಣಕುಮಾರನ ತಂದೆ ತಾಯಿಗಳು ____________ ಆಗಿದ್ದರು.

ಅ) ಕುಂಟರು　　ಆ) ಕಿವುಡರು

ಇ) ಮೂಗರು　　ಈ) ಕುರುಡರು

೨. ದಶರಥನು ____________ ವಿದ್ಯೆಯಲ್ಲಿ ಪರಿಣಿತನಾಗಿದ್ದನು.

ಅ) ಜಲಸ್ತಂಭನ　　ಆ) ಶಬ್ದವೇಧಿ

ಇ) ದೃಷ್ಟಿಯುದ್ಧ　　ಈ) ಮಲ್ಲಯುದ್ಧ

೩. ಶ್ರವಣಕುಮಾರನು ತನ್ನ ತಂದೆ ತಾಯಿಗಳನ್ನು ____________ ಕರೆದೊಯ್ದನು.

ಅ) ಕಾಡಿಗೆ　　ಆ) ತೀರ್ಥಯಾತ್ರೆಗೆ

ಇ) ಬೇಟೆಗೆ　　ಈ) ರಾಜನಲ್ಲಿಗೆ

೪. ಶ್ರವಣಕುಮಾರನು ತಂದೆ ತಾಯಿಗಳನ್ನು ಪುಣ್ಯಕ್ಷೇತ್ರಗಳಿಗೆ __________ ಕರೆದೊಯ್ದನು.

ಅ) ಹೆಗಲಲ್ಲಿ ಹೊತ್ತು　　ಆ) ನಡೆಸಿಕೊಂಡು

ಇ) ರಥದಲ್ಲಿ　　ಈ) ದೋಣಿಯಲ್ಲಿ

## III. ಭಾಷಾಭ್ಯಾಸ :

**ಅ) ಈ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿ ಬರೆಯಿರಿ.**

೧. ಚಡಪಡಿಸು :..........................................................................................

೨. ಅಭಿಮಾನ :..........................................................................................

೩. ರೋಧಿಸು :..........................................................................................

೪. ಭರವಸೆ :..........................................................................................

೫. ಭಾವಿಸು :..........................................................................................

**ಆ) ಈ ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

೧. ಸಮಾಧಾನ x ..........................

೨. ಆಸೆ x ..........................

೩. ಉಪಾಯ x ..........................

೪. ಅಭಿಮಾನ x ..........................

೫. ತಪ್ಪು x ..........................

೬. ಅನರ್ಥ x ..........................

೭. ಪುಣ್ಯ x ..........................

೮. ಶಬ್ದ x ..........................



**ಇ) ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.**

೧. ಆಸೆಯನ್ನು = .......................... + ..........................

೨. ಆಯಾಸವರಿತು = .......................... + ..........................

೩. ಕರೆದೊಯ್ದನು = .......................... + ..........................

೪. ದಾಪುಗಾಲು = .......................... + ..........................

**ಈ) ಈ ಕೆಳಗಿನ ಪದಗಳನ್ನು ಗಮನಿಸಿರಿ.**

**ಬುಳುಬುಳು, ದಿಗ್ಗನೆ, ವಿಲವಿಲನೆ.**

ಈ ಪದಗಳಿಗೆ ಅರ್ಥವಿರುವುದಿಲ್ಲ. ಹೀಗೆ ಅರ್ಥವಿಲ್ಲದ ಧ್ವನಿ ವಿಶೇಷಣಗಳನ್ನು ತಾನು ಕೇಳಿದಂತೆ ಪುನಃ ಅನುಕರಣ ಮಾಡಿ ಹೇಳುವ ಶಬ್ದಗಳನ್ನು ಅನುಕರಣೀಯ ಅವ್ಯಯಗಳು ಎಂದು ಕರೆಯುತ್ತಾರೆ. ಈ ರೀತಿಯ ಹಲವು ಪದಗಳನ್ನು ಪಟ್ಟಿಮಾಡಿರಿ.



## ಗದ್ಯ ಪಾಠ – ೧೬




# ಬಕಾಸುರನ ವಧೆ

ಪಾಂಡವರು ಅರಗಿನ ಅರಮನೆಯ ಬೆಂಕಿಯಿಂದ ಪಾರಾದರು. ಏಕಚಕ್ರ ಎಂಬ ಊರಿಗೆ ಬಂದರು. ಅದೊಂದು ಅಗ್ರಹಾರ. ಅಲ್ಲಿ ಬ್ರಾಹ್ಮಣನೊಬ್ಬನ ಮನೆಯ ಪಕ್ಕದಲ್ಲಿ ವಾಸಿಸತೊಡಗಿದರು. ಒಂದು ದಿನ ಆ ಬ್ರಾಹ್ಮಣರ ಮನೆಯಿಂದ ಜೋರಾಗಿ ಅಳುವ ಧ್ವನಿ ಕೇಳಿಸಿತು. ಕುಂತಿ ಏನೆಂದು ವಿಚಾರಿಸಲು ಹೋದಳು. ಆ ಊರಿನ ಸಮೀಪದ ಬೆಟ್ಟದಲ್ಲಿ ಬಕಾಸುರನೆಂಬ ರಾಕ್ಷಸನು ವಾಸವಾಗಿದ್ದನು. ಅವನಿಗೆ ಹಸಿವಾದಾಗ ಊರಿನೊಳಗೆ ನುಗ್ಗಿ ಸಿಕ್ಕ ಸಿಕ್ಕ ಜನರನ್ನು ಕೊಂದು ತಿನ್ನುತ್ತಿದ್ದನು. ಅವರು ಸದಾ ಭಯದ ನೆರಳಿನಲ್ಲಿ ಬದುಕುತ್ತಿದ್ದರು. ಈ ಕಷ್ಟದಿಂದ ಪಾರಾಗಲು ಊರಿನ ಜನರು ಆ ರಾಕ್ಷಸನೊಂದಿಗೆ ಒಪ್ಪಂದವನ್ನು ಮಾಡಿಕೊಂಡರು. ದಿನ ದಿನವೂ ಸರದಿಯಂತೆ ಒಬ್ಬರ ಮನೆಯಿಂದ ಒಂದು ಬಂಡಿ ಅನ್ನ, ಎರಡು ಬಲಿಷ್ಠ ಹೋರಿಗಳು ಮತ್ತು ಒಬ್ಬ ಮನುಷ್ಯನನ್ನು ಒಪ್ಪಿಸಬೇಕಿತ್ತು.





ಈಗ ಆ ಬ್ರಾಹ್ಮಣನ ಮನೆಯ ಸರದಿಯಿತ್ತು. ಅವರಿಗೆ ಒಬ್ಬನೇ ಮಗನು. ಅವನು ರಾಕ್ಷಸನ ಆಹಾರವಾಗಬೇಕಲ್ಲಾ ಎಂದು ದುಃಖಿಸುತ್ತಿದ್ದರು. ಆಗ ಕುಂತಿ ಅವರಿಗೆ ಸಮಾಧಾನ ಹೇಳಿದಳು. ಅವರ ಮಗನ ಬದಲು ತನ್ನ ಐವರು ಮಕ್ಕಳಲ್ಲಿ ಒಬ್ಬನನ್ನು ಕಳುಹಿಸಿ ಕೊಡುವುದಾಗಿ ಭರವಸೆ ನೀಡಿದಳು. ಇತರೆ ಸಿದ್ಧತೆಗಳನ್ನು ಮಾಡಿಕೊಳ್ಳಲು ತಿಳಿಸಿದಳು. ಕುಂತಿ ಮನೆಗೆ ಬಂದಳು. ಭೀಮನಿಗೆ ಎಲ್ಲಾ ವಿಷಯ ತಿಳಿಸಿದಳು. ನಾಳೆ ನಿನಗೆ ಮೃಷ್ಟಾನ್ನ ಭೋಜನ; ಹೊಟ್ಟೆ ತುಂಬ ಊಟ ಮಾಡಬಹುದೆಂದಳು.

ಮರುದಿನ ಭೀಮ ನಸುಕಿನಲ್ಲಿಯೆ ಎದ್ದನು. ಬೇಗ ಬೇಗ ಸ್ನಾನಾದಿಗಳನ್ನು ಮಾಡಿ ವೀರಗಚ್ಚೆ ಹಾಕಿ ಸಿದ್ಧನಾದನು. ಬಂಡಿಯಲ್ಲಿ ಬಗೆಬಗೆಯ ಆಹಾರವನ್ನು ದೊಡ್ಡ ದೊಡ್ಡ ಪಾತ್ರೆಗಳಲ್ಲಿ ತುಂಬಿ ಇಡಲಾಗಿತ್ತು. ಹಾಲು, ಮೊಸರು, ತುಪ್ಪದ ಗಡಿಗೆಗಳನ್ನು ಒಪ್ಪವಾಗಿ ಜೋಡಿಸಿದ್ದರು. ತಾಯಿ ಕುಂತಿಗೆ ನಮಸ್ಕರಿಸಿ ಭೀಮ ಬಂಡಿಯನ್ನು ಏರಿದನು.

ಇನ್ನೊಬ್ಬರಿಗಾಗಿ ತನ್ನ ಪ್ರಾಣ ಕೊಡಲು ಭೀಮನು ಸಿದ್ಧನಾದನು. ಈ ತ್ಯಾಗಿಯನ್ನು ಊರಿನ ಜನರು ಅಚ್ಚರಿಯಿಂದ ನೋಡುತ್ತಿದ್ದರು. ಆದರೆ ಭೀಮ ಯಾವ ಭಯವೂ ಇಲ್ಲದೆ ನಗು ನಗುತ್ತ ನಾನು ಹೋಗಿ ಬರುವೆ. ನೀವು ಹೊರಡಿ ಎಂದು ಊರ ಜನರಿಗೆ ಸಮಾಧಾನ ಹೇಳಿದ. ಬಂಡಿಯನ್ನು ರಾಕ್ಷಸನಿದ್ದ ಕಡೆಗೆ ಓಡಿಸಿದ.

ಬಂಡಿ ಊರಿನಿಂದ ದೂರ ಬಂದಿತು. ಅಡುಗೆಯ ಸುವಾಸನೆ ಭೀಮನ ಹಸಿವನ್ನು ಕೆರಳಿಸಿತು. ಹೋರಿಗಳನ್ನು ನಿಧಾನವಾಗಿ ಹೋಗಲು ಬಿಟ್ಟನು. ಒಂದೊಂದಾಗಿ ಭಕ್ಷ್ಯಗಳನ್ನು ಸವಿಯತೊಡಗಿದ. ದೊಡ್ಡ ದೊಡ್ಡ ತುತ್ತುಗಳನ್ನು ಮಾಡುತ್ತ ಚೆಂಡಿನಂತೆ ಹಾರಿಸುತ್ತ. ಮೋಜಿನಿಂದ ಊಟ ಮಾಡಲು ತೊಡಗಿದ. ಮಧ್ಯ ಮಧ್ಯದಲ್ಲಿ ಹಾಲು ತುಪ್ಪದ ಗಡಿಗೆಗಳನ್ನು ಎತ್ತಿ ಎತ್ತಿ ಕುಡಿದನು. ಮುಕ್ಕಾಲು ಪಾಲು ಬಂಡಿಯ ಅನ್ನವನ್ನು ಭೀಮನೇ ಮುಗಿಸಿದನು. ಹೋರಿಗಳು ಬಂಡಿಯನ್ನು ಎಳೆಯುತ್ತಾ ಎಳೆಯುತ್ತಾ ರಾಕ್ಷಸನಿರುವ ಬೆಟ್ಟದ ಬುಡಕ್ಕೆ ಬಂದವು.

ದಿನವೂ ಬೇಗ ಬರುವ ಬಂಡಿ ಇಂದು ತಡವಾಗಿ ಬಂದುದನ್ನು ಕಂಡು ರಾಕ್ಷಸನಿಗೆ ಕೋಪ ನೆತ್ತಿಗೇರಿತ್ತು. ಬಂಡಿಯನ್ನು ಕಂಡ ಕೂಡಲೇ ಬೆಟ್ಟದ ಮೇಲಿಂದ ದಡದಡನೆ ಕೆಳಗಿಳಿದು ಬಂದ. ಅವನನ್ನು ಕಂಡ ಭೀಮ ಅನ್ನ ಮೆತ್ತಿದ ಕೈಯನ್ನು ನೆಕ್ಕುತ್ತ. "ಎಲವೋ ಕುನ್ನಿ, ಕೂಳಿದೆ, ತಿನ್ನು ಬಾ" ಎಂದು ಕರೆದನು. ಇಲ್ಲಿಯವರೆಗೆ ಜನ ತನ್ನನ್ನು ಕಂಡ ಕೂಡಲೇ ಗಡಗಡ ನಡುಗುತ್ತಿದ್ದರು. ಆದರೆ ಇವನು ತಾನು ತಿಂದು ಮಿಕ್ಕಿದ್ದನ್ನು ತಿನ್ನು ಬಾ ಎಂದು ಏಕವಚನದಲ್ಲಿ ಕರೆದುದಕ್ಕೆ ಬಹಳ ಸಿಟ್ಟು ಬಂತು. ಮೊದಲು ಇವನನ್ನು ಮುಗಿಸಿ, ಅನ್ನ – ಹೋರಿಗಳನ್ನು ತಿನ್ನುವೆ. ನಂತರ ಊರಿನ ಜನರ ಪ್ರಾಣವನ್ನು ಹಿಂಡುವೆ ಎಂದು ಮುನ್ನಡೆದನು.

ಅತ್ತ ಭೀಮ ರಾಕ್ಷಸನಿಗೆ ಸಿಟ್ಟು ತರಿಸಲು ಅನ್ನದ ದೊಡ್ಡ ದೊಡ್ಡ ತುತ್ತನ್ನು ಹಾರಿಸುತ್ತಾ ಬಾಯಲ್ಲಿ ಹಿಡಿಯುತ್ತಿದ್ದನು. ರಾಕ್ಷಸನನ್ನು ನೋಡಿ ಭಕ್ಷ್ಯಗಳನ್ನು ತೋರಿಸಿ ಅಣಕಿಸ ತೊಡಗಿದನು. ಬಕಾಸುರ ಕೋಪದಿಂದ ಎರಡು ಕೈ ಮುಷ್ಟಿಕಟ್ಟಿ, ಭೀಮನ ಬೆನ್ನಿಗೆ ಗುದ್ದನ್ನು ಕೊಟ್ಟನು. ಭೀಮ ಆ ಏಟಿಗೆ ನಗುತ್ತಾ "ಇಷ್ಟೇನಾ ನಿನ್ನ ಶಕ್ತಿ ?" ಎಂದು ಹಂಗಿಸಿದನು.

ಬಕಾಸುರನಿಗೆ ಎಲ್ಲಿಲ್ಲದ ಕೋಪ ಬಂತು. ಭೀಮನ ಮೇಲೆ ಏರಿ ಬಂದನು. ಒಬ್ಬರನ್ನೊಬ್ಬರು ಗುದ್ದಿದರು. ಬೆಟ್ಟದ ಬಂಡೆಗಲ್ಲುಗಳನ್ನು ಎತ್ತಿ ಬಿಸಾಡಿದರು. ಮರಗಳನ್ನು ಬೇರು ಸಹಿತ ಕಿತ್ತು ಒಬ್ಬರ ಮೇಲೊಬ್ಬರು ಎಸೆದರು.

ಕೊನೆಗೆ ಭೀಮ ಬಕಾಸುರನ ಮುಖಕ್ಕೆ ಏಟನ್ನು ಕೊಟ್ಟನು. ಬಕಾಸುರ ರಕ್ತವನ್ನು ಕಾರುತ್ತ ಸತ್ತುಬಿದ್ದನು.

ಆಗಲೆ ಸಂಜೆಯಾಗಿತ್ತು. ಭೀಮ ಬಕಾಸುರನ ಹೆಣದೊಂದಿಗೆ ಊರಿಗೆ ಬಂದನು. ಊರ ಮುಂದೆ ಬಂಡಿಯನ್ನು ನಿಲ್ಲಿಸಿ, ಮನೆಗೆ ಹೋಗಿ ಹಾಯಾಗಿ ನಿದ್ರಿಸಿದನು. ಮರುದಿನ ಬಂಡಿಯಲ್ಲಿರುವ ರಾಕ್ಷಸನನ್ನು ಕಂಡ ಜನ ಹೆದರಿದರು. ಆದರೆ ಸತ್ತಿರುವುದನ್ನು ಕಂಡು ಸಂತಸಪಟ್ಟರು. ಭೀಮನ ಧೈರ್ಯವನ್ನು ಮೆಚ್ಚಿ ಕೊಂಡಾಡಿದರು.

* * * *



## ಅಭ್ಯಾಸ

### I. ಪದಗಳ ಅರ್ಥ :

**ಅರಗು** – ಕರಗುವ ಒಂದು ಬಗೆಯ ದ್ರವ್ಯ.
**ಒಪ್ಪಂದ** – ಕರಾರು
**ಕುನ್ನಿ** – ನಾಯಿಮರಿ
**ನಸುಕು** – ಬೆಳಗಿನ ಜಾವ.
**ಬಂಡಿ** – ಗಾಡಿ; ಚಕ್ಕಡಿ.
**ಭೋಜನ** – ಊಟ
**ಮಿಕ್ಕು** – ಮೀರು; ಉಳಿದ.
**ವಧೆ** – ಸಂಹರಿಸು; ಕೊಲ್ಲು.
**ಸರದಿ** – ಪಾಳಿ; ಅನುಕ್ರಮ.
**ಹಿಂಡು** – ಪೀಡಿಸು; ತೊಂದರೆ ಕೊಡು.
**ಅಗ್ರಹಾರ** –ಬ್ರಾಹ್ಮಣರು ವಾಸಿಸುವ ಕೇರಿ.
**ಕಾರು** – ವಾಂತಿಮಾಡು
**ಕೊಂಡಾಡು** – ಹೊಗಳು
**ನೆತ್ತಿಗೇರು** – ಹೆಚ್ಚಾಗು
**ಭಕ್ಷ್ಯ** – ಸಿಹಿ ತಿಂಡಿ
**ಮೃಷ್ಟಾನ್ನ** – ರಸಕವಳ
**ಮುಷ್ಟಿ** – ಮುಚ್ಚಿದ ಕೈ
**ವೀರಗಚ್ಚೆ** – ವೀರರು ಹಾಕುವ ಕಚ್ಚೆ.
**ಹಂಗಿಸು** – ಮೂದಲಿಸು; ಹೀಯಾಳಿಸು.
**ಹೋರಿ** – ಎತ್ತು; ಗೂಳಿ; ವೃಷಭ.

## II. ಪ್ರಶ್ನೆಗಳು :

### ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಪಾಂಡವರು ಅರಗಿನ ಅರಮನೆಯಿಂದ ಪಾರಾಗಿ ಯಾವ ಊರಿಗೆ ಬಂದರು?

೨. ಪಾಂಡವರ ತಾಯಿಯ ಹೆಸರೇನು?

೩. ಕುಂತಿ ಬ್ರಾಹ್ಮಣನ ಮನೆಗೆ ಏಕೆ ಹೋದಳು?

೪. ಕುಂತಿ ಬ್ರಾಹ್ಮಣ ದಂಪತಿಗಳಿಗೆ ಏನೆಂದು ಸಮಾಧಾನಪಡಿಸಿದಳು?

೫. ಕುಂತಿ ಭೀಮನಿಗೆ ಏನೆಂದು ಹೇಳಿದಳು?

೬. ಭೀಮನು ರಾಕ್ಷಸನನ್ನು ಏನೆಂದು ಕೂಗಿ ಕರೆದನು?

### ಆ) ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಏಕಚಕ್ರ ಊರಿನ ಜನರು ಭಯದಲ್ಲಿ ಏಕೆ ಬದುಕುತ್ತಿದ್ದರು?

೨. ಏಕಚಕ್ರ ಊರಿನ ಜನರು ರಾಕ್ಷಸನೊಂದಿಗೆ ಯಾವ ಒಪ್ಪಂದ ಮಾಡಿಕೊಂಡಿದ್ದರು?

೩. ಭೀಮನು ರಾಕ್ಷಸನ ಬಳಿ ಯಾವ ಸಿದ್ಧತೆಗಳೊಂದಿಗೆ ಹೊರಟನು?

೪. ರಾಕ್ಷಸನ ಬಳಿಗೆ ಹೊರಟ ಭೀಮನು ತನ್ನ ಹಸಿವನ್ನು ಹೇಗೆ ನೀಗಿಸಿಕೊಂಡನು?

೫. ಭೀಮನು ರಾಕ್ಷಸನಿಗೆ ಹೇಗೆ ಕೋಪ ಬರಿಸಿದನು?

೬. ಭೀಮನು ರಾಕ್ಷಸನೊಂದಿಗೆ ಹೇಗೆ ಹೋರಾಡಿದನು?

### ಇ) ಈ ಕೆಳಗಿನ ಮಾತುಗಳನ್ನು ಯಾರು ಯಾರಿಗೆ ಹೇಳಿದರು? ಬರೆಯಿರಿ.

೧. "ನಾಳೆ ನಿನಗೆ ಮೃಷ್ಟಾನ್ನ ಭೋಜನ; ಹೊಟ್ಟೆ ತುಂಬ ಊಟ ಮಾಡಬಹುದು."

೨. "ಎಲವೋ ಕುನ್ನಿ ಕೂಳಿದೆ ಬಾ"

೩. "ಇಷ್ಟೇನಾ ನಿನ್ನ ಶಕ್ತಿ?"

**ಈ) ಬಿಟ್ಟ ಸ್ಥಳಗಳನ್ನು ಕೊಟ್ಟಿರುವ ನಾಲ್ಕು ಆಯ್ಕೆ ಉತ್ತರಗಳಿಂದ ಸರಿಯಾದುದನ್ನು ಆರಿಸಿ ಬರೆಯಿರಿ.**

೧. ಪಾಂಡವರ ಸಂಖ್ಯೆ ................................

ಅ) ಮೂರು ಆ) ನಾಲ್ಕು ಇ) ಐದು ಈ) ಆರು

೨. ಬ್ರಾಹ್ಮಣ ದಂಪತಿಗಳು ......................... ಬಲಿ ಆಗುತ್ತಿರುವುದಕ್ಕೆ ದುಃಖಿಸಿದರು.

ಅ) ಮಗ ಆ) ಹೋರಿ ಇ) ಗಾಡಿ ಈ) ಭೀಮ

೩. ರಾಕ್ಷಸನ ಬಳಿಗೆ ಹೊರಟ ಭೀಮನನ್ನು ಜನರು .................. ನೋಡುತ್ತಿದ್ದರು.

ಅ) ಭಯದಿಂದ ಆ) ಅಚ್ಚರಿಯಿಂದ ಇ) ದುಃಖದಿಂದ ಈ) ಸಂತೋಷದಿಂದ

೪. ಏಕಚಕ್ರ ಊರಿನ ಜನರು ...................... ಜೊತೆ ಒಪ್ಪಂದ ಮಾಡಿಕೊಂಡಿದ್ದರು.

ಅ) ಕುಂತಿಯ ಆ) ರಾಕ್ಷಸನ ಇ) ಭೀಮನ ಈ) ಬ್ರಾಹ್ಮಣನ



## III. ಭಾಷಾಭ್ಯಾಸ :

**ಅ) ಈ ಕೆಳಗಿನ ಪದಗಳನ್ನು ಗಮನಿಸಿರಿ.**

**ಸಿಕ್ಕಸಿಕ್ಕ, ದಿನದಿನವೂ, ಬೇಗಬೇಗ** – ಈ ರೀತಿಯ ಪದಗಳನ್ನು ದ್ವಿರುಕ್ತಿ ಎಂದು ಕರೆಯಲಾಗುತ್ತದೆ. ನಾವು ಮಾತನಾಡುವಾಗ ಭಾವನೆಗಳ ತೀವ್ರತೆ ಹೆಚ್ಚಾದಾಗ ಈ ರೀತಿಯ ಪದಗಳನ್ನು ಬಳಸುತ್ತೇವೆ. ಪ್ರಸ್ತುತ ಪಾಠದಲ್ಲಿ ಈ ರೀತಿಯ ಪದಗಳು ಬಹಳಷ್ಟು ಬಾರಿ ಬಳಕೆ ಆಗಿವೆ. ಅವುಗಳನ್ನು ಗಮನಿಸಿ, ಪಟ್ಟಿಮಾಡಿರಿ.

**ಆ) ಈ ಕೆಳಗಿನ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿ ಬರೆಯಿರಿ.**

೧. ಸಿದ್ಧನಾಗು :..........................................................................................

೨. ತ್ಯಾಗಿ :..........................................................................................

೩. ಸಂತಸಪಡು :..........................................................................................

೪. ಪಾರಾಗು :..........................................................................................

೫. ಕೊಂಡಾಡು :..........................................................................................

## ಇ) ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.

೧. ಸ್ನಾನಾದಿ = ........................ + ........................

೨. ವೀರಗಚ್ಚೆ = ........................ + ........................

೩. ಇನ್ನೊಬ್ಬ = ........................ + ........................

೪. ಕೆಳಗಿಳಿದು = ........................ + ........................

೫. ಬಂಡೆಗಲ್ಲು = ........................ + ........................

## ಈ) ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.

೧. ಭಯ x ........................

೨. ಬಲಿಷ್ಠ x ........................

೩. ದುಃಖ x ........................

೪. ಸಮಾಧಾನ x ........................

೫. ಧೈರ್ಯ x ........................



## ಉ) ಈ ಕೆಳಗಿನ ಪದಗಳಿಗೆ ಸಮಾನಾರ್ಥಕ ಪದಗಳನ್ನು ಬರೆಯಿರಿ.

೧. ಬಂಡಿ : ........................ ........................ ........................

೨. ಹಿಂಡು : ........................ ........................ ........................

೩. ಹೋರಿ : ........................ ........................ ........................

## ಊ) ಈ ಕೆಳಗಿನ ಪದಗಳಿಗೆ ವಿಭಿನ್ನ ಅರ್ಥಬರುವ ಪದಗಳನ್ನು ಬರೆಯಿರಿ.

೧. ಹಿಂಡು : ........................ ........................ ........................

೨. ಕಾರು : ........................ ........................ ........................



## ಭಾಗ – ೩ ಪೂರಕ ಓದು

### ಪತ್ರ ಲೇಖನ

ಮಕ್ಕಳೇ, ಹತ್ತಿರದಲ್ಲಿ ಇರುವವರಿಗೆ ನಿಮ್ಮ ವಿಚಾರಗಳನ್ನು ಮಾತಿನ ಮೂಲಕ ತಿಳಿಸುತ್ತೀರಿ. ಅದೇ ದೂರದಲ್ಲಿ ಇರುವವರಿಗೆ ಪತ್ರದ ಮೂಲಕ ನಿಮ್ಮ ವಿಚಾರಗಳನ್ನು ತಿಳಿಸಬೇಕಾಗುತ್ತದೆ. ಇಂದು ದೂರವಾಣಿ ಸೌಲಭ್ಯಗಳು ದೂರದಲ್ಲಿ ಇರುವವರೊಡನೆ ಸಂಪರ್ಕ ಹೊಂದಲು ಸಹಾಯಕವಾಗಿದ್ದರೂ ಪತ್ರಗಳು ತಮ್ಮದೇ ಆದ ಮಹತ್ವವನ್ನು ಹೊಂದಿವೆ. ಶಾಲೆಗಳಲ್ಲಿ ನಿಮಗೆ ರಜೆ ಬೇಕಾದರೆ, ವರ್ಗಾವಣೆ ಪತ್ರ ಬೇಕಾದರೆ, ವಿದ್ಯಾರ್ಥಿ ವೇತನ ಪಡೆಯಬೇಕಾದರೆ ನೀವು ಪತ್ರದ ಬರೆವಣಿಗೆಯ ಮೂಲಕವೇ ಕೇಳಿ ಪಡೆಯಬೇಕಾಗುತ್ತದೆ. ಹೀಗಾಗಿ ಪತ್ರಗಳನ್ನು ಬರೆಯುವ ಕ್ರಮವನ್ನು ನೀವು ಅಗತ್ಯವಾಗಿ ತಿಳಿದುಕೊಳ್ಳಲೇ ಬೇಕು. ಇಲ್ಲಿ ನಿಮಗೆ ರಜೆ ಅರ್ಜಿ ಬರೆಯುವ ಕ್ರಮವನ್ನು ಮಾದರಿಯಾಗಿ ನೀಡಿದೆ.

**ರಜೆ ಅರ್ಜಿ ಬರೆಯುವಾಗ ಗಮನಿಸಬೇಕಾದ ಅಂಶಗಳು :**

**೧. ಪತ್ರ ಬರೆಯುವವರ ವಿಳಾಸ ಮತ್ತು ದಿನಾಂಕ :**

ಪತ್ರದ ಮೇಲ್ಭಾಗದ ಆರಂಭದಲ್ಲಿ ಯಾರು ಪತ್ರ ಬರೆಯುತ್ತಿದ್ದಾರೆ ಅವರ ಪೂರ್ಣ ವಿಳಾಸ ಹಾಗೂ ಪತ್ರ ಬರೆಯುತ್ತಿರುವ ದಿನಾಂಕವನ್ನು ಸರಿಯಾಗಿ ಬರೆಯಬೇಕು. ಇದನ್ನು **ಇವರಿಂದ,** ಎಂದು ಬರೆದು ಆರಂಭಿಸಬೇಕು.

**೨. ಪತ್ರ ತಲುಪಬೇಕಾದವರ ವಿಳಾಸ :**

ಪತ್ರ ಬರೆಯುವವರ ವಿಳಾಸವನ್ನು ಬರೆದ ನಂತರ ಅದರ ಕೆಳಭಾಗದಲ್ಲಿ ಪತ್ರ ಯಾರಿಗೆ ತಲುಪಬೇಕಾಗಿದೆ ಅವರ ವಿಳಾಸವನ್ನು ಬರೆಯಬೇಕು. ಇದನ್ನು **ಇವರಿಗೆ,** ಎಂದು ಬರೆದು ಆರಂಭಿಸಬೇಕು.

**೩. ಗೌರವ ಸೂಚಕ ಪದದ ಬಳಕೆ :**

ನೀವು ಯಾರಿಗೆ ಪತ್ರ ಬರೆಯುತ್ತಿದ್ದೀರಿ ಅವರಿಗೆ ಗೌರವ ಸೂಚಕವಾಗಿ ಏನೆಂದು ಕರೆಯಲು ಬಯಸುತ್ತೀರಿ? ಅದನ್ನು ಅವರವರ ಸ್ಥಾನಮಾನಕ್ಕೆ ಅನುಗುಣವಾಗಿ ಬರೆಯಬೇಕು. **ಉದಾ:** ಮಾನ್ಯರೇ, ಗೌರವಾನ್ವಿತರೇ, ಸ್ವಾಮಿ, ಗುರುಗಳೇ, ಸನ್ಮಾನ್ಯರೇ....

### ೪. ಪತ್ರದ ವಿಷಯ :

ಪತ್ರವನ್ನು ಯಾವ ಉದ್ದೇಶಕ್ಕಾಗಿ ಬರೆಯುತ್ತಿದ್ದೀರಿ ಅದನ್ನು ಒಂದು ಸರಳ ವಾಕ್ಯದಲ್ಲಿ ನೇರವಾಗಿ ವಿಷಯ ಎಂದು ನೀಡಿ ಬರೆಯಬೇಕು.

### ೫. ಪತ್ರದ ವಿವರ :

ಪತ್ರದ ವಿಷಯಕ್ಕೆ ಸಂಬಂಧಿಸಿದ ವಿವರಗಳನ್ನು ನೇರವಾಗಿ ಸೂಕ್ತ ಕಾರಣಗಳನ್ನು ನೀಡಿ ಬರೆಯಬೇಕು. ಬರೆವಣಿಗೆ ವಿನಯದಿಂದ ಕೂಡಿರಬೇಕು. ಗೊಂದಲ ಹಾಗೂ ದೋಷಗಳಿಗೆ ಅವಕಾಶಗಳಿರಬಾರದು.

### ೬. ಪತ್ರದ ಮುಕ್ತಾಯ :

ಪತ್ರದ ಅಂತ್ಯದಲ್ಲಿ ವಂದನೆಗಳನ್ನು ಸಲ್ಲಿಸಬೇಕು. ನಂತರ ತಮ್ಮ ವಿಧೇಯತೆಯನ್ನು ಹಾಗೂ ಆತ್ಮೀಯತೆಯನ್ನು ಸೂಚಿಸುವ ಒಕ್ಕಣಿಕೆಯನ್ನು ಬಲಭಾಗದ ಕೊನೆಯಲ್ಲಿ ಬರೆದು ಸಹಿಯನ್ನು ಹಾಕಬೇಕು. ಸಹಿ ಇರದ ಪತ್ರಗಳಿಗೆ ಮಾನ್ಯತೆ ಇರುವುದಿಲ್ಲ.



### ಸೂಚನೆಗಳು :

ಪತ್ರವನ್ನು ಅಂಚೆಯ ಮೂಲಕ ಕಳುಹಿಸುವುದಾದರೆ ಲಕೋಟೆಯ ಮೇಲೆ ಪತ್ರ ತಲುಪಬೇಕಾದವರ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು. ಪತ್ರ ಕಳುಹಿಸುವವರು ತಮ್ಮ ವಿಳಾಸವನ್ನು ಪತ್ರದ ಒಂದು ಅಂಚಿನಲ್ಲಿ ಬರೆಯುವುದನ್ನು ಮರೆಯಬಾರದು. ಒಂದುವೇಳೆ ಪತ್ರ ಸಂಬಂಧಿಸಿದವರಿಗೆ ತಲುಪದಿದ್ದರೆ ಮರಳಿ ನಿಮ್ಮ ವಿಳಾಸಕ್ಕೆ ಪತ್ರ ಹಿಂತಿರುಗುತ್ತದೆ. ಅಂಚೆಯ ಡಬ್ಬಕ್ಕೆ ಪತ್ರವನ್ನು ಹಾಕುವ ಮೊದಲು ಅಗತ್ಯವಿರುವಷ್ಟು ಅಂಚೆಚೀಟಿಗಳನ್ನು (ಸ್ಟ್ಯಾಂಪ್) ತಪ್ಪದೆ ಅಂಟಿಸಬೇಕು.

ಇಲ್ಲಿ ನೀಡಿರುವ 'ರಜೆಯ ಪತ್ರ' ಗಮನಿಸಿರಿ. ನೀವು ಯಾವುದೇ ಸರ್ಕಾರಿ ಸಂಘ ಸಂಸ್ಥೆಗಳಿಗೆ ಅರ್ಜಿ ಬರೆಯಬೇಕಾದರೆ ಇದೇ ಕ್ರಮವನ್ನು ಅನುಸರಿಸಬೇಕಾಗುತ್ತದೆ.

* * * *

# ರಜೆ ಪತ್ರ

ಇವರಿಂದ, ದಿನಾಂಕ ೨೫-೧೧-೨೦೧೭

**ರಾಧಾ ಎಸ್.**
ತಂದೆ ಸುನೀಲಕುಮಾರ
೫ ನೇ ತರಗತಿ, ವಿದ್ಯಾಭಾರತಿ ಪ್ರಾಥಮಿಕ ಶಾಲೆ,
ತುಮಕೂರು.

ಇವರಿಗೆ,
**ವರ್ಗಶಿಕ್ಷಕರು**
೫ ನೇ ತರಗತಿ, ವಿದ್ಯಾಭಾರತಿ ಪ್ರಾಥಮಿಕ ಶಾಲೆ,
ತುಮಕೂರು.

ಮಾನ್ಯರೆ,

**ವಿಷಯ** : ಎರಡು ದಿನ ರಜೆ ನೀಡುವಂತೆ ಕೋರಿ

ವಿಷಯಕ್ಕೆ ಸಂಬಂಧಿಸಿದಂತೆ, ನನ್ನ ಅಕ್ಕನ ಮದುವೆಯು ದಿನಾಂಕ ೨೮ ಮತ್ತು ೨೯ನೇ ನವೆಂಬರ್ ೨೦೧೭ ರಂದು ದಾವಣಗೆರೆಯಲ್ಲಿ ನಡೆಯಲಿದೆ. ಈ ಸಮಾರಂಭದಲ್ಲಿ ನಾನು ಪಾಲ್ಗೊಳ್ಳಬೇಕಾಗಿರುವುದರಿಂದ ಅಂದು ಶಾಲೆಗೆ ಬರಲು ಕಷ್ಟವಾಗುತ್ತದೆ. ಆದ ಕಾರಣ ಮೇಲಿನ ಎರಡು ದಿನಗಳಿಗೆ ರಜೆಯನ್ನು ನೀಡಬೇಕೆಂದು ವಿನಂತಿಸುತ್ತೇನೆ.

ನಮಸ್ಕಾರಗಳೊಂದಿಗೆ,

ತಮ್ಮ ವಿಧೇಯ ವಿದ್ಯಾರ್ಥಿನಿ

(ರಾಧಾ)

ಪಾಲಕರ ಸಹಿ
(ಸುನೀಲಕುಮಾರ)

## ಖಾಸಗಿ ಪತ್ರ

ಮಕ್ಕಳೇ, ನೀವು ರಜೆ ಅರ್ಜಿ ಬರೆಯುವ ಕ್ರಮವನ್ನು ಇದುವರೆಗೆ ತಿಳಿದಿರಿ. ಈಗ ಇನ್ನೊಂದು ಬಗೆಯ ಪತ್ರವನ್ನು ಬರೆಯುವ ಕ್ರಮವನ್ನು ತಿಳಿಯೋಣ. ಸಾಮಾನ್ಯವಾಗಿ ದೂರದಲ್ಲಿರುವ ತಂದೆ ತಾಯಿಗಳಿಗೆ, ಅಣ್ಣತಮ್ಮಂದಿರಿಗೆ, ಅಕ್ಕತಂಗಿಯರಿಗೆ, ಗೆಳೆಯರಿಗೆ ಇಲ್ಲವೇ ಬಂಧು ಬಳಗದವರಿಗೆ ಪತ್ರಗಳನ್ನು ನಾವು ಬರೆಯುತ್ತೇವೆ. ಇವರೆಲ್ಲರೂ ನಮಗೆ ಸಂಬಂಧಿಕರೆ ಆಗಿರುತ್ತಾರೆ. ಇವರ ಜೊತೆ ನಮ್ಮ ಯೋಗಕ್ಷೇಮ ಹಾಗೂ ದೈನಂದಿನ ಖಾಸಗೀ ವಿಚಾರಗಳನ್ನು ಮುಕ್ತ ಮನಸ್ಸಿನಿಂದ ಹಂಚಿಕೊಳ್ಳುತ್ತೇವೆ. ಹೀಗಾಗಿ ಇಂತಹ ಪತ್ರಗಳನ್ನು ವೈಯಕ್ತಿಕ ಇಲ್ಲವೇ ಖಾಸಗೀ ಪತ್ರಗಳೆಂದು ಕರೆಯುತ್ತೇವೆ.

ಖಾಸಗೀ ಪತ್ರ ಬರೆಯುವುದಕ್ಕೆ ನಿರ್ದಿಷ್ಟ ಕ್ರಮ ಎಂಬುದು ಇರುವುದಿಲ್ಲ. ನಮ್ಮ ಅಗತ್ಯತೆಗೆ ಅನುಗುಣವಾಗಿ ಪತ್ರ ಬರೆಯುವುದುಂಟು. ಪತ್ರದಲ್ಲಿನ ವಿಚಾರಗಳು ಸಂಬಂಧಿಸಿದವರಿಗೆ ಅರ್ಥವಾಗುವಂತಿದ್ದರೆ ಸಾಕು. ಆದರೂ ಪತ್ರದ ಬರೆವಣಿಗೆ ನಿಮ್ಮ ವ್ಯಕ್ತಿತ್ವವನ್ನು ಪ್ರದರ್ಶಿಸುತ್ತದೆ ಎಂಬುದನ್ನು ನೆನಪಿಡಬೇಕು. ಆದ್ದರಿಂದ ಖಾಸಗೀ ಪತ್ರ ಬರೆಯವ ಕ್ರಮವನ್ನು ತಿಳಿಯುವುದು ಅಗತ್ಯವಾಗಿದೆ.



**ಖಾಸಗೀ ಪತ್ರ ಬರೆಯುವಾಗ ಗಮನಿಸಬೇಕಾದ ಅಂಶಗಳು :**

**೧. ಪತ್ರ ಬರೆಯುವವರ ವಿಳಾಸ ಮತ್ತು ದಿನಾಂಕ :** ಪತ್ರದ ಆರಂಭದಲ್ಲಿ ಪತ್ರ ಬರೆಯುವವರ ವಿಳಾಸ ಮತ್ತು ದಿನಾಂಕ ಇರಬೇಕು. ಅಂಚೆ ಇಲಾಖೆ ನಿಗದಿಪಡಿಸಿದ ಪತ್ರಗಳಲ್ಲಿ ಗೊತ್ತುಪಡಿಸಿದ ಜಾಗದಲ್ಲಿಯೇ ಪತ್ರ ಬರೆಯುವವರ ವಿಳಾಸವನ್ನು ಬರೆಯಬೇಕು.

**೨. ಗೌರವ ಸೂಚಕ ಪದದ ಬಳಕೆ :** ಪತ್ರವನ್ನು ಯಾರಿಗೆ ಬರೆಯುತ್ತಿದ್ದೇವೆ ಎಂಬುದನ್ನು ಗಮನದಲ್ಲಿಟ್ಟುಕೊಂಡು ಗೌರವ ಸೂಚಕ ಪದಗಳನ್ನು ಬಳಸಿ ಪತ್ರವನ್ನು ಆರಂಭಿಸಬೇಕು. ಉದಾ : ತೀರ್ಥರೂಪ, ಮಾತೃಶ್ರೀ, ಪ್ರೀತಿಯ, ಪೂಜ್ಯ, ಆತ್ಮೀಯ....

**೩. ಪತ್ರದ ವಿವರ :** ಪತ್ರ ಬರೆಯುತ್ತಿರುವ ಉದ್ದೇಶವನ್ನು ಗಮನದಲ್ಲಿಟ್ಟುಕೊಂಡು ಸರಳವಾಗಿ ಸ್ಪಷ್ಟವಾಗಿ ವಿಚಾರಗಳನ್ನು ವಿವರಿಸಿ ಬರೆಯಬೇಕು.

**೪. ಪತ್ರದ ಮುಕ್ತಾಯ :** ಪತ್ರದ ಅಂತ್ಯದಲ್ಲಿ ಆಶೀರ್ವಾದ ಇಲ್ಲವೇ ಶುಭಾಶಯ ಕೋರಿ ಸೂಕ್ತ ಸಂಬೋಧನೆಯನ್ನು ಬಳಸಿ ಸಹಿ ಮಾಡಬೇಕು.

## ಶೈಕ್ಷಣಿಕ ಪ್ರವಾಸಕ್ಕೆ ಹೋಗಲು ತಂದೆಯ ಅನುಮತಿ ಕೋರಿ ಪತ್ರ

ಶಿವಮೊಗ್ಗ
ದಿನಾಂಕ ೨೫-೧೧-೨೦೧೭

ಪೂಜ್ಯ ತಂದೆಯವರಿಗೆ ನಿಮ್ಮ ಮಗಳು ಸುಧಾ ಮಾಡುವ ನಮಸ್ಕಾರಗಳು...

ನಾನು ಇಲ್ಲಿ ಕ್ಷೇಮವಾಗಿರುವೆ. ತಮ್ಮ ಕ್ಷೇಮ ತಿಳಿಸಿರಿ. ನಾನು ಪ್ರಥಮ ಹಂತದ ಪರೀಕ್ಷೆಯಲ್ಲಿ ಎ+ ಶ್ರೇಣಿ ಗಳಿಸಿರುವೆ. ಕಳೆದ ವರುಷಕ್ಕಿಂತ ಈ ವರುಷದ ಸಾಧನೆ ಚೆನ್ನಾಗಿದೆ ಎಂದು ಗುರುಗಳು ಹೇಳಿದರು. ಚೆನ್ನಾಗಿ ಅಭ್ಯಾಸ ಮಾಡುತ್ತಿರುವೆ.

ಇನ್ನೊಂದು ಮುಖ್ಯ ವಿಚಾರವೇನೆಂದರೆ, ಡಿಸೆಂಬರ್ ತಿಂಗಳಿನಲ್ಲಿ ನಮ್ಮ ಶಾಲೆಯಲ್ಲಿ ಶೈಕ್ಷಣಿಕ ಪ್ರವಾಸವನ್ನು ಏರ್ಪಡಿಸಿದ್ದಾರೆ. ಅದೂ ಹಂಪೆಗೆ! ಅಪ್ಪಾಜಿ, ಹಂಪೆಯನ್ನು ನೋಡಲು ನನಗೆ ಬಲು ಆಸೆ. ವಿಜಯನಗರ ಸಾಮ್ರಾಜ್ಯದ ಬಗ್ಗೆ ಬಹಳಷ್ಟು ಕೇಳಿದ್ದೇನೆ. ಆಗಿನ ಕಾಲದ ಪರದೇಶದ ಪ್ರವಾಸಿಗರೂ ಬಹಳಷ್ಟು ಹೊಗಳಿದ್ದಾರೆ. ಆ ಮಹಾ ಸಾಮ್ರಾಜ್ಯದ ಅವಶೇಷಗಳನ್ನು ನೋಡಲೇಬೇಕೆಂಬ ಬಯಕೆ ಆಗುತ್ತಿದೆ. ಆದ್ದರಿಂದ ನಾನು ಪ್ರವಾಸ ಹೋಗಲು ಇಚ್ಛಿಸುತ್ತೇನೆ.

ಪ್ರವಾಸದ ವೆಚ್ಚವಾಗಿ ಪ್ರತಿ ವಿದ್ಯಾರ್ಥಿಗೆ ೫೦೦ ರೂಪಾಯಿಗಳನ್ನು ನಿಗದಿಪಡಿಸಲಾಗಿದೆ. ನೀವು ಆದಷ್ಟು ಬೇಗ ಪ್ರವಾಸದ ಶುಲ್ಕ ೫೦೦ ರೂ. ಮತ್ತು ನನ್ನ ಇತರ ಖರ್ಚಿಗೆ ೧೦೦ ರೂಪಾಯಿಗಳನ್ನು ಸೇರಿಸಿ ಒಟ್ಟು ೬೦೦ ರೂಪಾಯಿಗಳನ್ನು ಹಾಗೂ ಅಮ್ಮನಿಗೆ ಹೇಳಿ ಏನಾದರೂ ಸಿಹಿ ತಿಂಡಿಯನ್ನು ತನ್ನಿರಿ.

ಮನೆಯಲ್ಲಿ ಎಲ್ಲರಿಗೂ ನನ್ನ ನಮಸ್ಕಾರಗಳನ್ನು ತಿಳಿಸಿರಿ. ಪ್ರವಾಸದಿಂದ ನಂತರ ಪ್ರವಾಸದ ಅನುಭವಗಳನ್ನು ನಿಮಗೆ ತಿಳಿಸುವೆ. ಕೊನೆಯಲ್ಲಿ ನನ್ನ ಪುಟ್ಟ ತಂಗಿಗೆ ಶುಭ ಹಾರೈಕೆಗಳು.

ಇಂತಿ ನಿಮ್ಮ ಪ್ರೀತಿಯ ಮಗಳು

(ಸುಧಾ)

ಇವರಿಗೆ,
**ಶ್ರೀ ಶರಣಪ್ಪ ಬಡಿಗೇರ**
ಮನೆ ಸಂಖ್ಯೆ : ೩೪/೨
ಸಂಪಿಗೆಹಳ್ಳಿ - ಅಂಚೆ
ಚಿಕ್ಕಮಗಳೂರು - ತಾಲ್ಲೂಕು
ಪಿನ್ ಕೋಡ್ : ೫೭೭ ೧೦೨

ಭಾಷಾ ಚಟುವಟಿಕೆ : ೧

# ಚಿತ್ರ ನೋಡಿ ಕಥೆ ಓದು

ಒಂದು ನಲ್ಲಿ ಒಬ್ಬ ನಿದ್ದನು. ಅವನು ಒಂದು ದಿನ ಕಾಡಿಗೆ ಬೇಟೆ ಆಡಲು ಹೋದಾಗ ಯ ಮರಿಗಳು ಸಿಕ್ಕವು. ಅವುಗಳನ್ನು ಹಿಡಿದುಕೊಂಡು ಮನೆಗೆ ಬರುವಾಗ ದಾರಿಯಲ್ಲಿ ಯ ಆಶ್ರಮ ಸಿಕ್ಕಿತು. ಋಷಿಯು ಮರಿಗಳನ್ನು ನೋಡಿ ಒಂದನ್ನು ಬೇಟೆಗಾರನಿಂದ ಕೊಟ್ಟು ಪಡೆದನು. ಇನ್ನೊಂದನ್ನು ನು ಕಟುಕನಿಗೆ ಮಾರಿದನು.

ಕೆಲ ದಿನಗಳ ನಂತರ ನಿಗೆ ತಾನು ಮಾರಿದ ಗಳನ್ನು ನೋಡಲು ಆಸೆಯಾಯಿತು. ಮೊದಲು ಯ ಆಶ್ರಮಕ್ಕೆ ಬಂದನು. ಬೇಟೆಗಾರನನ್ನು ನೋಡಿದ ಯು "ದಯಮಾಡಿ ಒಳಗೆ ಬನ್ನಿ, ಕುಳಿತುಕೊಳ್ಳಿ" ಎಂದು ಉಪಚರಿಸಿತು. ಯ ಸಂಸ್ಕಾರ ಕಂಡು ನಿಗೆ ಬಹು ಸಂತೋಷವಾಯಿತು.

ನಂತರ ನು ಕಟುಕನ ಮನೆಗೆ ಬಂದನು. ಅಲ್ಲಿಯ ಯು ನನ್ನು ಕಂಡು "ಅವನನ್ನು ಹಿಡಿಯಿರಿ! ಹೊಡೆಯಿರಿ!! ಕಡಿಯಿರಿ !!!" ಎಂದು ಕೂಗಿ ಕೂಗಿ ಹೇಳಿತು. ಈ ಮಾತುಗಳನ್ನು ಕೇಳಿದ ನಿಗೆ ಬಹಳ ದುಃಖವಾಯಿತು.

ಈ ಗಳು ಒಂದೇ ತಾಯಿಯ ಮರಿಗಳಾಗಿದ್ದರೂ ಏಕೆ ಭಿನ್ನ ಭಿನ್ನವಾಗಿ ವರ್ತಿಸಿದವು? ಇದಕ್ಕೆ ಕಾರಣ ಅವು ಬೆಳೆದಂತಹ ವಾತಾವರಣ ಮತ್ತು ಪರಿಸರ. ಯ ಆಶ್ರಮದಲ್ಲಿ ಬೆಳೆದ ಯು ಒಳ್ಳೆಯ ಮಾತುಗಳನ್ನು ಕಲಿಯಿತು. ಆದರೆ ಕಟುಕನ ಮನೆಯಲ್ಲಿ ಬೆಳೆದ ಯು ಅಲ್ಲಿಯ ಕಸುಬಿಗೆ ತಕ್ಕಂತಹ ಕೆಟ್ಟ ಮಾತುಗಳನ್ನು ಕಲಿತಿತ್ತು.



**ನೀತಿ: ಬಿತ್ತಿದಂತೆ ಬೆಳೆ.**



ಭಾಷಾ ಚಟುವಟಿಕೆ : ೨

# ಚಿತ್ರ ನೋಡಿ ಕಥೆ ಓದು

ಒಂದು ಇತ್ತು. ಅಲ್ಲಿ ಒಂದು ವಾಸವಾಗಿತ್ತು. ಅದು ಒಮ್ಮೆ ದ ಬುಡದಲ್ಲಿ ಮಲಗಿತ್ತು. ಅಲ್ಲಿಗೆ ಒಬ್ಬ ನು ಬಂದನು. ಮಲಗಿರುವುದನ್ನು ಕಂಡನು. ಅದರ ಚರ್ಮವನ್ನು ಮಾರಿದರೆ ತುಂಬಾ ಹಣ ಬರುತ್ತದೆ ಎಂದು ಆಸೆ ಪಟ್ಟು ದಿಂದ ಗೆ ಗುರಿಯಿಟ್ಟು ಹೊಡೆಯಲು ಸಿದ್ಧನಾದನು.

ಅದೇ ಮರದ ಮೇಲೆ ಒಂದು ಇತ್ತು. ಅದು ನನ್ನು ನೋಡಿತು. ಯನ್ನು ಕಾಪಾಡಬೇಕೆಂದು ಯೋಚಿಸಿತು. ತಕ್ಷಣ ಬೇಟೆಗಾರನ ಮೇಲೆ ಕಿರುಚುತ್ತಾ ಹಾರಿತು. ದ ಗುರಿ ತಪ್ಪಿತು. ಆಗ ಎಚ್ಚರಗೊಂಡು ಓಡಿ ಹೋಯಿತು.

ನು ಕೋತಿಯ ಕುತಂತ್ರ ಕಂಡು ಕೋಪಗೊಂಡನು. ಅದಕ್ಕೆ ತಕ್ಕ ಪಾಠ ಕಲಿಸಬೇಕೆಂದು, ಗಿಡ ಬಳ್ಳಿಗಳಿಂದ ಒಂದು ಗೂಡನ್ನು ತಯಾರು ಮಾಡಿದನು. ಅದರೊಳಗೆ ಇಷ್ಟವಾಗುವ ಇಟ್ಟು, ಮರದ ಹಿಂದೆ ಅಡಗಿ ಕುಳಿತುಕೊಂಡನು.

ಅದೇ ಬುಡದಲ್ಲಿ ಗಳ ಹುತ್ತವಿತ್ತು. ಇರುವೆಗಳು ನೋಡಿದವು. ಯಾವುದೋ ಪ್ರಾಣಿಯನ್ನು ಹಿಡಿಯಲು ಹೊಂಚು ಹಾಕಿದ್ದಾನೆ. ಇವನನ್ನು ಇಲ್ಲಿಂದ ಓಡಿಸಬೇಕು ಎಂದುಕೊಂಡವು. ಎಲ್ಲಾ ಇರುವೆಗಳು ಸೇರಿಕೊಂಡು ಕಾಲುಗಳನ್ನು ಕಚ್ಚತೊಡಗಿದವು. ಅವನು ಹೆದರಿ ಅಲ್ಲಿಂದ ಓಡಿ ಹೋದನು. ಇದನ್ನು ಯೊಂದು ನೋಡಿತು. ಬೇಟೆಗಾರನನ್ನು ಏಕೆ ಕಚ್ಚಿದಿರಿ ಎಂದು ಕೇಳಿತು.

ಆಗ 'ದುಷ್ಟ ಅವನು, ನಮಗೆಲ್ಲ ಶತ್ರು. ಅದಕ್ಕೆ ಅವನನ್ನು ಕಚ್ಚಿದೆವು' ಎಂದು ಹೇಳಿದವು.

ಯು ಬಳಿಗೆ ಹೋಗಿ ನೀನು ಬೇಟೆಗಾರನ ಮೇಲೆ ಏಕೆ ಹಾರಿದೆ? ಎಂದು ಕೇಳಿತು. ಅದಕ್ಕೆ ಮಂಗವು ನಮ್ಮ ಅಣ್ಣನನ್ನು ಕೊಲ್ಲಲು ಬಿಡಲು ಸಿದ್ಧನಾಗಿದ್ದನು. ಹೀಗಾಗಿ ನಾನು ಅವನ ಮೇಲೆ ಹಾರಿ ಬೇಟೆಗಾರನ ಗುರಿ ತಪ್ಪಿಸಿ, ನಮ್ಮ ಅಣ್ಣನ ಪ್ರಾಣ ಉಳಿಸಿದೆ ಎಂದಿತು. ಬೇಟೆಗಾರ ಕೆಟ್ಟವ ಎಂದು ಗೆ ಯು ಹೇಳಿತು.

ಯು ಯ ಬಳಿಗೆ ಹೋಗಿ "ಹುಲಿರಾಯ ನೀನು ಏಕೆ ಓಡಿ ಹೋದೆ?" ಎಂದು ಕೇಳಿತು. ಅದಕ್ಕೆ ಹುಲಿಯು "ನಾನು ದ ಕೆಳಗೆ ಮಲಗಿರುವಾಗ ಯಾರೋ ಕಿರುಚಿದ ಶಬ್ದ ಕೇಳಿಸಿತು. ಕಣ್ಣು ತೆರೆದು ನೋಡಿದಾಗ ಕಂಡನು. ಅದಕ್ಕೆ ಹೆದರಿ ಓಡಿ ಹೋದೆನು" ಎಂದು ಹೇಳಿತು.

ಆಗ ಯು, ಮತ್ತು ಗಳು ಮಾಡಿದ ಸಹಾಯವನ್ನು ಗೆ ವರ್ಣಿಸಿತು. ಅಷ್ಟರಲ್ಲಿ ಕಿರುಚಿದ ಶಬ್ದ ಕೇಳಿ, ಮತ್ತು ಅಲ್ಲಿಗೆ ಓಡಿ ಬಂದವು. ಕಟ್ಟಿದ ಗೂಡಿನಲ್ಲಿ ವು ಸಿಕ್ಕಿ ಕಿರುಚುತ್ತಿತ್ತು. ತಕ್ಷಣ ಗೂಡನ್ನು ತನ್ನ ಮುಂಗಾಲುಗಳಿಂದ ಕಿತ್ತುಹಾಕಿತು. ಗೂಡಿನಿಂದ ಹೊರಗೆ ಬಂದು ಹುಲಿಗೆ ಧನ್ಯವಾದ ಹೇಳಿತು. ಅಂದಿನಿಂದ ಗಳು ಉತ್ತಮ ಗೆಳೆಯರಾಗಿ ಬಹುಕಾಲ ಬಾಳಿದವು.

**ನೀತಿ : ಇನ್ನೊಬ್ಬರ ಕಷ್ಟದಲ್ಲಿ ಸಹಾಯಮಾಡಿರಿ**



ಭಾಷಾ ಚಟುವಟಿಕೆ : ೩

# ಪದಬಂಧ

**ಜ್ಞಾನಪೀಠ ಪ್ರಶಸ್ತಿ ಪಡೆದ ಎಂಟು ಮಂದಿ ಕನ್ನಡದ ಕವಿಗಳ ಹೆಸರನ್ನು ಗುರುತಿಸಿರಿ.**

| | | | | | | | |
|---|---|---|---|---|---|---|---|
| ಚಂ | ದ್ರ | ಶೇ | ಖ | ರ | ಕಂ | ಬಾ | ರ |
| ಗಿ | ಶಿ | ನ | ತಿ | ಪು | ಕು | ವೆಂ | ಅ |
| ರೀ | ಶಿ | ವ | ವೆಂ | ತಿ | ಕ | ಪೂ | ನಂ |
| ಶ | ರ | ಕು | ರಾ | ಕಾ | ಶ್ರೀ | ಚಂ | ತ |
| ಕಾ | ಮಾ | ಬಾ | ಗೋ | ಮ | ಚಿ | ತೇ | ಮೂ |
| ನಾರ್ | ಸ್ತಿ | ಕೃ | ಕ | ಣ್ವ | ಕಾ | ಹ | ರ್ತಿ |
| ಡ | ವಿ | ಸಿ | ದ್ದ | ಲಿಂ | ಗ | ರಂ | ಕೀ |
| ಆ | ಸ್ತಿ | ದ | ರಾ | ಬೇಂ | ದ್ರೆ | ಯ್ಯ | ತ |

**ಮಾದರಿ:**

೧. ಕುವೆಂಪು

೨. ದ.ರಾ.ಬೇಂದ್ರೆ

೩. ........................................................................................

೪. ........................................................................................

೫. ........................................................................................

೬. ........................................................................................

೭. ........................................................................................

೮. ........................................................................................

# ಚಿತ್ರ ನೋಡಿ ಕಥೆ ಓದು

 ಪುರದಲ್ಲಿ  ಹಾಗೂ ಣ್ಣರೆಂಬ ಇಬ್ಬರು ಗೆಳೆಯರಿದ್ದರು. ಅವರು ಒಂದು ದಿನ ಕಟ್ಟಿಗೆ ತರಲು ಕಾಡಿಗೆ ಹೋದರು. ಕಾಡಿನಲ್ಲಿ ಒಂದು ದೂರದಲ್ಲಿ ಬರುತ್ತಿರುವುದನ್ನು ಕಂಡರು. ಯನ್ನು ಕಂಡು ಹೆದರಿದ ನು ಒಬ್ಬನೆ ಬೇಗನೆ ವನ್ನು ಹತ್ತಿ ಕುಳಿತನು. ಆದರೆ ಣ್ಣನಿಗೆ ಹತ್ತಲು ಬರುತ್ತಿರಲಿಲ್ಲ. ನು ಣ್ಣನಿಗೆ ಹತ್ತಲು ಸಹಾಯವನ್ನೂ ಮಾಡಲಿಲ್ಲ. ಕೊನೆಗೆ ಣ್ಣನು ಒಂದು ಉಪಾಯ ಮಾಡಿ ದ ಕೆಳಗೆ ಸತ್ತಂತೆ ಮಲಗಿದನು. ಯು ನೆಲದ ಮೇಲೆ ಮಲಗಿದ್ದ ಣ್ಣನನ್ನು ನೋಡಿ, ಯನ್ನು ಮೂಸಿ ಹೋಯಿತು. ನಂತರ ನು ದಿಂದ ಕೆಳಗೆ ಇಳಿದು ಬಂದು, ಣ್ಣ ಯು ನಿನ್ನ ಯಲ್ಲಿ ಏನು ಹೇಳಿತು? ಎಂದು ಕೇಳಿದನು. ಅದಕ್ಕೆ ಣ್ಣನು "ಸಮಯಕ್ಕೆ ಸಹಾಯವಾಗದ ಗೆಳೆಯ ಮಿತ್ರ ದ್ರೋಹಿ" ಎಂದು ಹೇಳಿತು ಎಂದನು.



**ನೀತಿ: ಆಪತ್ತಿಗಾದವನೇ ಮಿತ್ರ**



# ಪದಬಂಧ

**ಕಾಡು ಪ್ರಾಣಿಗಳನ್ನು ಗುರ್ತಿಸಿ: ಮಾದರಿ : ತೋಳ**

| | | | | | | |
|---|---|---|---|---|---|---|
| ಆ | ಘೇಂ | ರು | ಕಾ | ಡು | ಕೋ | ಣ |
| ಕ | ನೆ | ಡಾ | ಹು | ಲಿ | ಸು | ಮೊ |
| ಳು | ಹು | ಚಿ | ಲ್ಲ | ಕ | ತ್ತೆ | ಲ |
| ಕೆ | ಜಿಂ | ರ | ಮಾ | ಕು | ರಿ | ನ |
| ಸಿಂ | ಹ | ತೆ | ಕ | ದು | ಗೆ | ಕಾ |
| ತೋ | ಳ | ಮೊ | ರ | ರೆ | ಮಂ | ಗ |
| ಕಾ | ಡೆ | ಮ್ಮೆ | ಡಿ | ಸೋ | ವು | ಹಾ |

## ನುಡಿ ಗಟ್ಟುಗಳು

| | | |
|---|---|---|
| ಅಂಗಲಾಚು | – | ಬೇಡು; ಮೊರೆಯಿಡು. |
| ಎತ್ತಿಕಟ್ಟು | – | ಪ್ರಚೋದಿಸು |
| ಎದೆಗುಂದು | – | ಧೈರ್ಯಗೆಡು |
| ಕಣ್ಣು ತಪ್ಪಿಸು | – | ಪಾರಾಗು |
| ಕಣ್ಮುಚ್ಚು | – | ಸಾಯು |
| ಕಥೆಕಟ್ಟು | – | ಸುಳ್ಳು ಹೇಳು |
| ಕಷ್ಟಕೋಟಲೆ | – | ಕಷ್ಟ–ನಷ್ಟಗಳು |
| ತಳಿರು ತೋರಣ | – | ಮಾವಿನ ಎಲೆಯ ತೋರಣ; ಸಿಂಗಾರ. |
| ದಂಗಾಗು | – | ಅಚ್ಚರಿಪಡು |
| ದಿಕ್ಕು ತೋರದಾಗು | – | ಏನೂ ತಿಳಿಯದಂತಾಗು. |
| ದಿಕ್ಸೂಚಿ | – | ಮಾರ್ಗದರ್ಶಿ |
| ದಿಕ್ಕೆಟ್ಟು | – | ಏನೂ ಕಾಣದಂತಾಗಿ. |
| ಪುಡಿಪುಡಿಯಾಗು | – | ಚೂರಾಗು; ನಾಶವಾಗು. |
| ಬಿರುಮಳೆ | – | ಚಂಡಮಾರುತ ಮಳೆ. |
| ಭವಿಷ್ಯ ಬಿದ್ದು ಹೋಗು | – | ನಷ್ಟವಾಗು; ಭವಿಷ್ಯವಿಲ್ಲದಂತಾಗು. |
| ಮೂಕ ಪ್ರೇಕ್ಷಕ | – | ಅನ್ಯಾಯವನ್ನು ಕಂಡು ಸುಮ್ಮನಿರುವುದು. |
| ಸಿಡಿದೇಳು | – | ಸಿಟ್ಟಿಗೇಳು |
| ಹೌಹಾರು | – | ಎದೆಗುಂದು |
| ಹಂಚಿಕೆ ಹೂಡು | – | ಉಪಾಯ ಮಾಡು. |





# ಗಾದೆ ಮಾತುಗಳು

೧. ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ.

೨. ಉಪ್ಪಿಗಿಂತ ರುಚಿಯಿಲ್ಲ, ತಾಯಿಗಿಂತ ಬಂಧುವಿಲ್ಲ.

೩. ಕೈ ಕೆಸರಾದರೆ ಬಾಯಿ ಮೊಸರು.

೪. ಕೂತು ಉಣ್ಣುವವನಿಗೆ ಕುಡಿಕೆ ಹೊನ್ನು ಸಾಲದು.

೫. ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ.

೬. ತಾಳಿದವನು ಬಾಳಿಯಾನು.

೭. ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ.

೮. ಮಾಡಿದ್ದುಣ್ಣೋ ಮಹಾರಾಯ.

೯. ಆಳಾಗಿ ದುಡಿ, ಅರಸಾಗಿ ಉಣ್ಣು.

೧೦. ಅತಿಯಾಸೆ ಗತಿಗೇಡು.

೧೧. ಮನಸ್ಸಿದ್ದರೆ ಮಾರ್ಗ.

೧೨. ಹೊತ್ತು ಕಳೆದರೆ ಹೋಯಿತು, ಮುತ್ತು ಒಡೆದರೆ ಹೋಯಿತು.

*****